

# ಚಂದಮಾಮ

ಅಕ್ಟೋಬರ್ 1985

★

## ಈ ಸಂಚಿಕೆಯಲ್ಲಿ



★


ಬಿಡಿ ಪ್ರತಿ ರೂ. ೨-೦೦

ವಾರ್ಷಿಕ ಚಂದಾ ರೂ. ೨೪-೦೦



## ಓದುಗರಲ್ಲಿ ವಿಜ್ಞಾಪನೆ

'ಚಂದಮಾಮ' ಪ್ರಕಾಶನಕ್ಕೆ ಸಂಬಂಧಪಟ್ಟ ನ್ಯೂಸ್‌ಪ್ರಿಂಟ್ ಕಾಗದದ ಬೆಲೆ, ಈ ಮಧ್ಯ ಕಾಲದಲ್ಲಿ ವಿಪರೀತ ಹೆಚ್ಚಿಹೋಯಿತು. ಆದರೂ ಪತ್ರಿಕೆಯ ಬೆಲೆ ಏರಿಸುವುದರ ಮೂಲಕ ಆ ಭಾರ ವನ್ನು ಓದುಗರ ಮೇಲೆ ಹಾಕದಿರಲು ಎಷ್ಟೋ ಪ್ರಯತ್ನಿಸಿದೆವು. ಆದರೆ ಈಗ ಇರುವ ಬೆಲೆಗೆ ಪತ್ರಿಕೆ ಹೊರತರುವುದು ಸಾಧ್ಯ ವಿಲ್ಲವೆಂಬ ಪರಿಣಾಮಕ್ಕೆ ಬಂದಿದೆ. ಆದುದರಿಂದ ನವೆಂಬರ್ '೮೫ ರ ಸಂಚಿಕೆಯಿಂದ 'ಚಂದಮಾಮ' ಪ್ರತಿಯ ಬೆಲೆ ೫೦ ಪೈಸೆ ಹೆಚ್ಚಿಸಲೇ ಬೇಕಾಯಿತು. ನವೆಂಬರ್ '೮೫ ರಿಂದ 'ಚಂದಮಾಮ' ಬಿಡಿಪ್ರತಿಯ ಬೆಲೆ ರೂ. ೨–೫೦. ವಾರ್ಷಿಕ ಚಂದಾ ೩೦–೦೦ ರೂಪಾಯಿಗಳು. ಓದುಗರೂ, ಏಜೆಂಟರೂ ಈ ಬದಲಾವಣೆ ಯನ್ನು ಗಮನಿಸಿ, ನಮ್ಮ ಪರಿಸ್ಥಿತಿಯನ್ನು ಸಹೃದಯತೆಯಿಂದ ಅರ್ಥಮಾಡಿಕೊಂಡು, ಎಂದಿನಂತೆ ನಮ್ಮೊಂದಿಗೆ ಸಹಕರಿಸ ಬೇಕೆಂದು ಕೇಳಿಕೊಳ್ಳುತ್ತೇವೆ.

— ಪ್ರಕಾಶಕರು

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಸಾಧಾರಣವಾಗಿ ಕೆಲವರು ಸ್ವಾಭಾವಿಕವಾಗಿಯೇ ಉದಾಸೀನದವರಾಗಿ ಜಡಭಾರದಿಂದಿರುತ್ತಾರೆ. ಆದರೆ ಅವರ ಮನಸ್ಸು ಸುಮ್ಮನಿರುವುದಿಲ್ಲ. ಕಣ್ಣು ಕಿವಿಗಳಿಂದ ಗ್ರಹಿಸಿಕೊಂಡುದನ್ನು ಆಲೋಚಿಸಿಕೊಂಡಿರುತ್ತದೆ. ಅವರು ಹೆಚ್ಚು ಮಾತಾಡಲಾರರು. ಅಂಥವರನ್ನು ನೋಡಿ ಏತಕ್ಕೂ ಆಗದವನೆನ್ನುವಂತಿಲ್ಲ. ಮಾತಾಡಿಸಿದ ಕೂಡಲೇ ಬಾಯಿತುಂಬ ಮಾತಾಡುವವರೇ ಬಹು ಗಟ್ಟಿಗರೆಂದುಕೊಳ್ಳುವವರು "ಸಲಹೆಗಳ ಶಿವ" ಎಂಬ ಈ ಸಂಚಿಕೆಯಲ್ಲಿರುವ ಕಥೆಯನ್ನು ನೋಡಿ ತಿದ್ದಿಕೊಳ್ಳಬೇಕಾಗುತ್ತದೆ.

## ಅಮರವಾಣಿ

**ಅಭ್ಯಾಸೇನ ನ ಲಭ್ಯಂತೇ ಚತ್ವಾರಃ ಸಹಜಾ ಗುಣಾಃ**
**ದಾತೃತ್ವಂ ಪ್ರಿಯವಕ್ತೃತ್ವಂ ಕವಿತ್ವಮುಚಿತಜ್ಞತಾ**

ದಾನಗುಣ, ಮರ್ಯಾದೆಯ ಮಾತುಗಳು, ಕವಿತ್ವ, ಉಚಿತಾನುಚಿತಜ್ಞಾನ ಇವಿಷ್ಟೂ ಕೇವಲ ಅಭ್ಯಾಸದಿಂದ ಬರುವಂಥವಲ್ಲ. ಸ್ವಭಾವಸಿದ್ಧವಾಗಿ ಬರತಕ್ಕಂಥವು.

---

ಸಂಪುಟ : ೭೫ ಅಕ್ಟೋಬರ್ '೭೫ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೦೦ : : ವಾರ್ಷಿಕ ಚಂದಾ ರೂ. ೨೪-೦೦



ನಿಜವಾದ ಮೋಜು, ಗೋಲ್ಡ್ ಸ್ಪಾಟ್ ಮೋಜು.




GS-2-85-KAN

cially flavoured. Contains no fruit juice or fruit pulp.

**serve chilled**



## ಚಂದಮಾಮನ ಹರಟೆ



### ವಿದ್ಯಾರ್ಥಿಗಳ ಪರ್ವತಾರೋಹಣ

ಬೊಂಬಾಯಿಯ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜೀ ವಿದ್ಯಾಸಂಸ್ಥೆಗೆ ಸೇರಿದ ಆರು ಮಂದಿ ವಿದ್ಯಾರ್ಥಿಗಳು ಒಂದಾಗಿ ಕೂಡಿ ಇತ್ತೀಚೆಗೆ ಕಿನ್ನಾರ್ ಹಿಮಾಲಯಗಳಲ್ಲಿಯ ೬೩೪೯ ಮೀಟರ್ಸ್ ಎತ್ತರವಾದ ಪವರಂಗ್ ಶಿಖಿರವನ್ನು ಜಯಪ್ರದವಾಗಿ ಅಧಿರೋಹಿಸಿದರು !

### ಬಾಲರ ಚಿತ್ರಸಂಸ್ಥೆ



ಬೆಂಗಳೂರಿನ ಸಮೀಪದಲ್ಲಿ ಹದಿನೆಂಟು ಕೋಟಿ ರೂಪಾಯಿಗಳ ವ್ಯಯದಿಂದ ಏಷ್ಯಾ ಖಂಡದೊಳಗೇ ಅತಿ ದೊಡ್ಡದಾದ ಚಿಲ್ಡ್ರನ್ಸ್ ಫಿಲ್ಮ್ ಕಾಂಪ್ಲೆಕ್ಸ್ ಒಂದನ್ನು ರೂಪಿಸಲ್ಪಡಲಿದೆ. ಈ ವಿಷಯವನ್ನು ಹೇಳುತ್ತ ಚಿಲ್ಡ್ರನ್ಸ್ ಫಿಲ್ಮ್ ಸೊಸೈಟೀ ಆಫ್ ಇಂಡಿಯಾ ಅಧ್ಯಕ್ಷ ಅಮೋಲ್ ಪಾಲೇಕರ್, "ಇಲ್ಲಿ ಬಾಲರಿಗಾಗಿ ಚಿತ್ರ ನಿರ್ಮಾಣ ಮಾಡುವವರೊಂದಿಗೆ ಬಾಲಕರಿಂದ ಕೂಡಾ ಚಿತ್ರಗಳನ್ನು ತೆಗೆಯಿಸಲ್ಪಡಲಿದೆ" ಎಂದರು.



### ಅತಿ ಪುರಾತನ ರಾಕ್ಷಸ ಹಲ್ಲಿಗಳು

ಅರಿಜೋನಾ ಮರುಭೂಮಿಯಲ್ಲಿ ೨೨೫ ಮಿಲಿಯ ಸಂವತ್ಸರಗಳಿಗೆ ಹಿಂದಿನ ಡಿನೋಜಾರ್ ಎಂಬ ರಾಕ್ಷಸ ಹಲ್ಲಿಯ ಅಸ್ಥಿಪಂಜರವೊಂದು ಹೊರಬಿದ್ದಿದೆ. ಕಾಲಿಫೋರ್ನಿಯಾ ವಿಶ್ವವಿದ್ಯಾಲಯಕ್ಕೆ ಸೇರಿದ ರಾಬ್‌ಲಾಂಗ್ ಎಂಬ ನಿಪುಣನು ಅದೇ ಅತಿ ಪುರಾತನವಾದ ರಾಕ್ಷಸ ಹಲ್ಲಿಯ ಅಸ್ಥಿಪಂಜರವಾಗಿದೆ ಎಂದು ಅಭಿಪ್ರಾಯಪಡುತ್ತಾನೆ.

## ನಿಮಗೆ ಗೊತ್ತೇ?

೧. ನಮ್ಮ ದೇಶದಲ್ಲಿ ಮೊತ್ತಮೊದಲು ಪ್ರಕಟಿಸಲ್ಪಟ್ಟ ವಾರ್ತಾ ಪತ್ರಿಕೆ ಯಾವುದೆಂದು ನಿಮಗೆ ಗೊತ್ತೇ ?

೨. ಅಮೆರಿಕಾದಲ್ಲಿ ರಬ್ಬರು ತಯಾರಿಕೆಗೆ ಕೇಂದ್ರವಾಗಿರುವ ಸ್ಥಳವು ಯಾವುದು ?

೩. ಶ್ರೀಲಂಕದಲ್ಲಿ ಮುಸ್ಲಿಮರೂ, ಹಿಂದುಗಳೂ, ಬೌದ್ಧರೂ ಪವಿತ್ರವಾಗಿ ಭಾವಿಸುವ ಪರ್ವತವು ಯಾವುದೆಂದು ನಿಮಗೆ ಗೊತ್ತೇ ?

೪. ಬುದ್ಧನು ಹುಟ್ಟಿದ್ದು ಲುಂಬಿನೀ ವನದಲ್ಲಿ. ಅವನು ನಿರ್ಯಾಣ ಹೊಂದಿದ್ದು ಎಲ್ಲೆಂದು ನಿಮಗೆ ಗೊತ್ತಿದೆಯೆ ?

೫. ಯೋಗಶಾಸ್ತ್ರವನ್ನು ಕುರಿತು ಕ್ರಿ. ಪೂ. ಎರಡನೇ ಶತಾಬ್ದದಲ್ಲಿಯೇ ಸೂತ್ರಗಳನ್ನು ರಚಿಸಿದವನಾರೆಂದು ನೀವು ಬಲ್ಲಿರಾ ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣ ಗಾಥಾವಳಿ :**

# ಅಂಧಕಾಸುರ

ಅಂಧಕನೆಂದರೆ ಕುರುಡನೆಂದು ಅರ್ಥ. ಆದರೆ ಅಂಧಕಾಸುರನು ಮಾತ್ರ ಕುರುಡನಲ್ಲ. ಅದರ ಮೇಲೆ ಅಂದುಕೊಂಡ ಮಾತ್ರಕ್ಕೇ ಸಾವಿರ ಕಣ್ಣುಗಳೂ, ಎರಡು ಕೈಗಳೂ ಹುಟ್ಟಿಕೊಳ್ಳುವಂತೆ ಬ್ರಹ್ಮನಿಂದ ವರ ಪಡೆದವನು. ಅಹಂಕಾರದಿಂದ ಕಣ್ಣು ಕಾಣದೆ ಪ್ರವರ್ತಿಸಿದ ಗುಣದಿಂದಾಗಿ ಅವನಿಗೆ ಅಂಧಕನೆಂಬ ಹೆಸರು ಬಂತು.

ಮಿತಿಮೀರಿದ ಗರ್ವದಿಂದ ಅಂಧಕನು ಸಾಧು ಜನರನ್ನು, ಋಷಿಗಳನ್ನು, ದೇವತೆಗಳನ್ನು ಹಿಂಸಿಸ ತೊಡಗಿದನು. ಅವನ ಕಾಟಗಳಿಂದ ತಪ್ಪಿಸಿಕೊಳ್ಳುವುದು ಹೇಗೆಂದು ತಿಳಿಯದೆ, ಋಷಿಗಳೂ, ದೇವತೆಗಳೂ ನಾರದನ ಹತ್ತಿರ ಹೋಗಿ ಅವನ ಸಹಾಯ ಕೇಳಿದರು. ನಾರದನು ಒಂದು ಪಥಕವನ್ನು ಆಲೋಚಿಸಿದನು :

ಮಂದಾರ ಪರ್ವತದ ಮೇಲೆ ಅಪೂರ್ವ ಪರಿಮಳ ಬೀರುವ ಮಂದಾರ ಪುಷ್ಪಗಳಿವೆ. ನಾರದನು ಆ ಮಂದಾರ ಹೂಗಳ ಮಾಲೆಯನ್ನು ಕೊರಳಿನಲ್ಲಿ ಧರಿಸಿ ಅಂಧಕನ ಭವನದ ಕಡೆಗೆ ಹೋದನು.

ಆ ಹೂಗಳ ಅದ್ಭುತವಾದ ಪರಿಮಳಕ್ಕೆ ಮುಗ್ಧನಾದ ಅಂಧಕನು "ಈ ಪುಷ್ಪಗಳು ಎಲ್ಲಿ ಲಭಿಸುತ್ತವೆ ?" ಎಂದು ನಾರದನನ್ನು ಕೇಳಿದನು.

"ಮಂದಾರಗಿರಿಯ ಮೇಲಿವೆ" ಎಂದು ತನ್ನೊಳಗೇ ನಕ್ಕನು ನಾರದ.

ಅಂಧಕನು ಆಗಿಂದಾಗಲೇ ಮಂದಾರ ಪರ್ವತದ ಕಡೆಗೆ ನಡೆದನು. ಮಂದಾರ ಪರ್ವತ ಪ್ರಾಂತವು ಶಿವನಿಗೆ ಸೇರಿದುದು. ಶಿವಭಕ್ತ, ವಿಷ್ಣು ಭಕ್ತರ ಹೊರತು ಬೇರೆ ಯಾರೂ ಆ ಪರ್ವತದ ಮೇಲೆ ಕಾಲಿಡಲು ಸಾಧ್ಯವಿಲ್ಲ.

ಅಂಧಕನು ಮಿತಿಮೀರಿದ ಗರ್ವಿಷ್ಠನಾದುದರಿಂದ ಅದನ್ನೆಲ್ಲಾ ಲಕ್ಷ್ಯ ಮಾಡದೆ ಪರ್ವತವನ್ನು ಅಧಿರೋಹಿಸತೊಡಗಿದನು. ಅದನ್ನು ನೋಡಿದ ಶಿವನು ಕೋಪಗೊಂಡು ಶೂಲವನ್ನು ಪ್ರಯೋಗಿಸಿದನು. ಮರುಕ್ಷಣದಲ್ಲಿ ಅಂಧಕಾಸುರನು ದಿಕ್ಕುಗಳು ಸೀಳುವ ಹಾಗೆ ಕೂಗುತ್ತಾ, ಪರ್ವತದ ಮೇಲಿನಿಂದ ಅಡಿಯಲ್ಲಿದ್ದ ಕಣಿವೆಯೊಳಗೆ ಬಿದ್ದು ಸತ್ತನು.






೧೧

[ ಗಂಡಭೇರುಂಡ ಪಕ್ಷಿಯ ರೆಕ್ಕೆಗಳೆಡೆಯಲ್ಲಿ ಅಡಗಿದ್ದ ಚಂದ್ರವರ್ಮನು ಜಾರಿ ಸರೋವರದೊಳಗೆ ಬಿದ್ದನು. ಅಲ್ಲಿ ಮೊಸಳೆಗಳ ದಾಳಿಯಿಂದ ತಪ್ಪಿಸಿಕೊಂಡು ಸರೋವರದ ತೀರದಲ್ಲಿದ್ದ ತೋಟದೊಳಗೆ ಹೋದನು. ಮಧ್ಯರಾತ್ರಿಯ ಹೊತ್ತಿಗೆ ಮಾಂತ್ರಿಕ ಶಂಖನ ಬೆಟ್ಟವನ್ನು ಹತ್ತಲು ನೋಡಿದ ಚಂದ್ರವರ್ಮನಿಗೆ, ಸಮೀಪ ವಿದ್ದ ಬಂಡೆಗಲ್ಲುಗಳ ರಾಶಿಯ ನಡುವೆ ಮಾಂತ್ರಿಕಳಾದ ಕಾಪಾಲಿನಿ ಕಾಣಿಸಿದಳು. ಇನ್ನು ಓದಿರಿ ]

ದೊಡ್ಡ ದೊಡ್ಡ ಎರಡು ಬಂಡೆಗಲ್ಲುಗಳ ನಡುವಿನಲ್ಲಿ ಇರುಕಿಕೊಂಡು ನೋವಿನ ಸಂಕಟದಿಂದ ಮೂಲುಗಿಕೊಂಡಿರುವ ಕಾಪಾಲಿನಿಯನ್ನು ನೋಡಿದ ಕೂಡಲೇ ಚಂದ್ರವರ್ಮನಿಗಾದ ಬೆರಗು ಅಷ್ಟಿಷ್ಟೆಂದು ಹೇಳುವಂತಿಲ್ಲ. ತಾನು ಗಂಡಭೇರುಂಡದ ರೆಕ್ಕೆಗಳ ಎಡೆಯಲ್ಲಿರುವಾಗ ಅಗ್ನಿಪಕ್ಷಿ ಗಂಡಭೇರುಂಡದೊಂದಿಗೆ ಹೇಳಿದ ಸಂಗತಿ ಅವನ ನೆನಪಿಗೆ ಬಂದಿತು. ಹೇಗೋ ಮಾಂತ್ರಿಕಳಾದ ಕಾಪಾಲಿನಿ ಗಂಡಭೇರುಂಡ ಪಕ್ಷಿಗಳಿಗೆ ಸಿಕ್ಕಿ, ಅವುಗಳಿಂದ ಈ ಶಂಖ ಮಾಂತ್ರಿಕನ ಗುಡ್ಡಗಳ ನಡುವೆ ಎತ್ತಿ ತಂದು ಹಾಕಲ್ಪಟ್ಟಿದ್ದಾಳೆಂದು ಅವನಿಗೆ ಗೊತ್ತಾಯಿತು. ಅವಳ ಶರೀರಕ್ಕೇನಾದರೂ ಪೆಟ್ಟಾಗಿರಬಹುದೇ ಎಂದು ಹೆದರಿಕೆಯೂ ಆಯಿತು. ಬಹು ಜಾಗರೂಕಳಾದ ಅವಳು ಹಾಗೆ ಸಿಕ್ಕಿಬಿದ್ದುದೊಂದು ದೊಡ್ಡ ಆಶ್ಚರ್ಯವೇ !

"ಕಾಪಾಲಿನೀ ! ಇದೇನಾಯಿತು ! ನಿನಗೆ ಪ್ರಾಣಾಪಾಯವಾದ ಪೆಟ್ಟೇನೂ ಆಗಲಿಲ್ಲವಷ್ಟೇ ?" ಎಂದು ಚಂದ್ರವರ್ಮನು ಅನುತಾಪ[illegible]ದಲೂ, ಆತುರದಿಂದಲೂ ಕೇಳುತ್ತಾ, ಕಾಪಾಲಿನಿಯ ಮೈಕೈಗಳನ್ನು ತಡವಿದನು.




"ವರ್ಮಾ, ನಾವು ಇಲ್ಲಿರುವುದು ಯಾವ ಹದ್ದಿನ ಕಣ್ಣಿಗೂ ಕಾಣಬಾರದು. ಆ ಬಿದಿರುಹಿಂಡುಗಳ ಹತ್ತಿರ ಅಡಗಿಕೊಳ್ಳಬಹುದೆಂದು ಕಾಣುತ್ತದೆ. ಅಲ್ಲಿಗೇ ಹೋಗೋಣ" ಎಂದಳು.

ಚಂದ್ರವರ್ಮನೂ, ಕಾಪಾಲಿನಿಯೂ ಸಣ್ಣ ಸಣ್ಣ ಕಲ್ಲುಗಳನ್ನು ಏರಿಯೂ, ಇಳಿದೂ ಸ್ವಲ್ಪಹೊತ್ತಿಗೆ ಬೆಟ್ಟದ ಬುಡದಲ್ಲಿರುವ ಒಂದು ಕತ್ತಲೆಯ ಗುಹೆಯೊಳಗೆ ಪ್ರವೇಶಿಸಿದರು.

ಆ ಗುಹೆಯ ದ್ವಾರವು ಬಹಳ ಸಣ್ಣದಾಗಿತ್ತು. ಅದನ್ನು ಎಲ್ಲಾ ಕಡೆಗಳಿಂದಲೂ ಬಿದಿರುಗಳು ಮುಚ್ಚಿಕೊಂಡಿದ್ದುವು. ಗುಹೆಯ ಒಳ ಭಾಗವು ಮಾತ್ರ ವಿಶಾಲವಾಗಿತ್ತು. ಗುಹೆಯ ಮೇಲು ಭಾಗದಲ್ಲಿ ಕಲ್ಲಿನ ಒಡಕು ಸಂದುಗಳೆಡೆಯಿಂದ ಸಣ್ಣ ಸಣ್ಣ ಬೆಳಕು ಅಲ್ಲಲ್ಲಿ ಬಿದ್ದಿತ್ತು. ಪರವಾಗಿಲ್ಲದ ಜಾಗ. ಮೊತ್ತದಲ್ಲಿ ಇದೊಂದು ಭದ್ರತೆಯ ಸ್ಥಳವಾಗಿ ಅವರಿಗೆ ತೋರಿತು.

ಕಾಪಾಲಿನಿ ಗುಹೆಯ ಒಂದು ಮೂಲೆಯಲ್ಲಿ "ಅಮ್ಮಾ" ಎಂದು ಉಬ್ಬಸಬಿಡುತ್ತ ಕುಳಿತಳು. ಆಗ ಚಂದ್ರವರ್ಮನು, "ಕಾಪಾಲಿನೀ, ನೀನು ಇಲ್ಲಿಗೆ ಹೇಗೆ ಬಂದೆ ಎಂಬುದು ನನಗೆ ಗೊತ್ತಿದೆ. ಈಗ ನೀನು ಇಲ್ಲಿಗೆ ಬಂದು ಬಿದ್ದ ಸಂಗತಿ ಶಂಖ ಮಾಂತ್ರಿಕನಿಗೆ ಗೊತ್ತಿದೆಯೇ ?" ಎಂದು ಕೇಳಿದನು.

ಕಾಪಾಲಿನಿ ಮುಸಿಮುಸಿ ನಕ್ಕಳು. ಅವಳಲ್ಲಿ ಸ್ವಲ್ಪವೂ ಭಯವಿರುವಂತೆ ಕಾಣಲಿಲ್ಲ.

"ಚಂದ್ರವರ್ಮಾ, ನಾನು ಈ ಬೆಟ್ಟದ ಹತ್ತಿರ ಇರುವ ಸಂಗತಿ ಗೊತ್ತಾದರೆ, ಶಂಖನು ಈಗಾಗಲೇ ನನ್ನನ್ನು ಹತಮಾಡಿಬಿಡುತ್ತಿದ್ದನು. ನಾನು ನಿನ್ನೆ ಬೆಳಂಜಾವದಿಂದಲೇ ಆ ಕಲ್ಲು ರಾಶಿಯ ನಡುವೆ ಬಿದ್ದುಕೊಂಡಿದ್ದೆ. ಥಕ್ಕನೆ ನನ್ನ ಮೇಲೆಬಿದ್ದು ಹಿಡಿದುಕೊಂಡ ಗಂಡಭೇರುಂಡ ಪಕ್ಷಿಗಳು ಎರಡೂ ನನ್ನ ಕಾಲನಾಗನಿಗೆ ಸಿಕ್ಕಿ ದುರ್ಮರಣ ಹೊಂದಿದುವು.

ಕಾಪಾಲಿನಿ ಗಂಟಲು ಒತ್ತಿಕೊಂಡಂತಹ ಸಣ್ಣ ದನಿಯಿಂದ, "ಚಂದ್ರವರ್ಮಾ, ಇಷ್ಟು ಗಟ್ಟಿಯಾಗಿ ಮಾತಾಡಬೇಡ. ನನಗೆ ಅಂತಹ ಪೆಟ್ಟೇನೂ ಆಗಲಿಲ್ಲ. ಈಗ ಮೊದಲು ನಾವು ಇಲ್ಲೆಲ್ಲಾದರೂ ಇರುವ ಒಂದು ಮರೆಯೊಳಗೆ ಹೋಗುವುದು ಒಳ್ಳೆಯದು. ಅಲ್ಲಿ ಎಲ್ಲಾ ವಿಷಯಗಳನ್ನೂ ಹೇಳುತ್ತೇನೆ. ನನಗೆ ಪ್ರಾಣಾಪಾಯವೇನೂ ಆಗಲಿಲ್ಲ. ಸ್ವಲ್ಪ ಕೈ ಸಹಾಯಕೊಟ್ಟರೆ ಎದ್ದು ನಿಲ್ಲುತ್ತೇನೆ. ಮೈಮುರಿದ ಹಾಗೆ ಸಂದು ಸಂದುಗಳಲ್ಲಿ ರಕ್ತ ಹೆಪ್ಪುಗಟ್ಟಿ ಹೋಗಿದೆ. ಚಲಿಸುವಾಗ ಸರಿಯಾಗಿ ಬಿಡುತ್ತದಪ್ಪ" ಎಂದಳು.

ಚಂದ್ರವರ್ಮನು ಕಾಪಾಲಿನಿಯ ಹತ್ತಿರ ಬಗ್ಗಿ ಬಲಗೈಯಿಂದ ಅವಳ ಭುಜವನ್ನು ಹಿಡಿದು ಎತ್ತಿ ಅವಳು ನಿಲ್ಲುವಂತೆ ಸಹಾಯಮಾಡಿದನು. ಆಮೇಲೆ ಕಾಪಾಲಿನಿ ಚಂದ್ರವರ್ಮನ ಕೈಗಳನ್ನು ಆಧಾರವಾಗಿ ಹಿಡಿದು, ಮೆಲ್ಲಮೆಲ್ಲನೆ ಕಾಲುಗಳನ್ನೆತ್ತಿ ನಡೆಯುತ್ತ,



ಕಾಲನಾಗನ ಸಹಾಯವಿಲ್ಲದಿರುತ್ತಿದ್ದರೆ ಇಷ್ಟರಲ್ಲಿ ನನ್ನ ಗತಿ ಮುಗಿಯುತ್ತಿತ್ತು" ಎಂದಳು ಕಾಪಾಲಿನಿ.

"ಹಾಗೇನು! ಹಾಗಾದರೆ ಇನ್ನು ನಾವು ಹೆದರ ಬೇಕಾಗಿಲ್ಲ. ನಾನು ಈ ಕತ್ತಲೆಯಲ್ಲೇ ಹೋಗಿ, ಶಂಖ ಮಾಂತ್ರಿಕನ ಮಂತ್ರ ಗೃಹದೊಳಗಿನ ಸಮಾಚಾರ ನೋಡಿಕೊಳ್ಳುತ್ತೇನೆ. ಸುಮ್ಮನೆ ತಡಮಾಡುವುದೇಕೆ? ಮುಖ್ಯ ಕಾರ್ಯ ಮುಗಿಸಿಬಿಡುತ್ತೇನೆ. ಆಮೇಲೆ ಎಲ್ಲಾ ಮಾತಾಡಿಕೊಳ್ಳೋಣ" ಎಂದು ಎದ್ದನು ಚಂದ್ರವರ್ಮ.

ಕಾಪಾಲಿನಿ ಚಂದ್ರವರ್ಮನನ್ನು ತಡೆದು, "ಚಂದ್ರವರ್ಮಾ, ಆ ಅಗ್ನಿಪಕ್ಷಿಯ ಸಂಗತಿ ಮರೆಯಬೇಡ. ರಾತ್ರಿಯ ಹೊತ್ತಿನಲ್ಲಿ ನಾವು ಹೆದರ ಬೇಕಾದುದು ಅಗ್ನಿಪಕ್ಷಿಗೇ. ಹಗಲು ಹೊತ್ತಿನಲ್ಲಿ ಶಂಖನನ್ನು ಕುರಿತು ಹೆದರಬೇಕಾಗುತ್ತದೆ. ಈ ರಾತ್ರಿಯಲ್ಲಿ ಅಗ್ನಿಪಕ್ಷಿಯ ಗಂಡಾಂತರ ಹೋದರೆ ಹೊರತು ನಮಗೆ ಕ್ಷೇಮವಿಲ್ಲ. ಅದರ ಸುದ್ದಿ ತಿಳಿಯಲಿಕ್ಕೆ ಕಾಲನಾಗವು ಪ್ರಯತ್ನಿಸುತ್ತಿದೆ. ನೀನು ಅವಸರಪಡಬೇಡಪ್ಪ" ಎಂದಳು.

"ಏನೇನು? ಕಾಲನಾಗವು ಇಲ್ಲಿಗೆ ಬಂದು ಅದನ್ನೂ ನೋಡುತ್ತಿದೆಯೇನು? ಎಲ್ಲಿ ಅಡಗಿದೆಯೋ?" ಎಂದು ಆಶ್ಚರ್ಯದಿಂದ ಕೇಳಿದನು ಚಂದ್ರವರ್ಮ.

ಚಂದ್ರವರ್ಮನ ಮಾತಿಗೆ ಕಾಪಾಲಿನಿ ನಕ್ಕಳು.

"ಚಂದ್ರವರ್ಮಾ, ಆ ಕಾಲನಾಗಕ್ಕೆ ನನ್ನ ಮೇಲಿನ ದಕ್ಕಿಂತಲೂ ನಿನ್ನ ಮೇಲೆಯೇ ಭಕ್ತಿವಿಶ್ವಾಸಗಳು ಹೆಚ್ಚೆಂದು ನನಗೆ ತಿಳಿದಿದೆ. ಹಠಾತ್ತಾಗಿ ನಿನ್ನನ್ನು ಇಲ್ಲಿ ನೋಡಿದಾಗ ನಾನೇನೂ ಆಶ್ಚರ್ಯಪಡಲಿಲ್ಲ. ಇಷ್ಟು ಬೇಗನೇ ಇಲ್ಲಿಗೆ ಹೇಗೆ ಬಂದೆ ಎಂತಲೂ ನಿನ್ನನ್ನು ನಾನು ಕೇಳಿದೆನೆ? ಇಲ್ಲ. ಅದಕ್ಕೆ ಕಾರಣ ಕಾಲನಾಗವು ನಿನ್ನ ಸಂಗತಿಯನ್ನೆಲ್ಲಾ ನನಗೆ ಹೇಳಿದೆ. ಅಡವಿಯಲ್ಲಿದ್ದ ವಿಚಿತ್ರ ವೃಕ್ಷದ ಹಣ್ಣನ್ನು ನೀನು ಕೊಯ್ದು ತಿಂದ ಸಂಗತಿ ತಿಳಿದಕೂಡಲೇ ನೀನು ಕ್ಷೇಮವಾಗಿ ಇಲ್ಲಿಗೆ ಬಂದು ಸೇರುವಿಯೆಂದು ನನಗೆ ಗೊತ್ತಾಯಿತು. ಇದೆಲ್ಲಾ ಆ ಕಾಲನಾಗವು ನಿನಗೆ ಮಾಡಿದ ವಿಶೇಷ ಸಹಾಯಗಳು."

ಕಾಪಾಲಿನಿಯ ಮಾತು ಮುಗಿಯಿತೆಂಬಷ್ಟರಲ್ಲಿ ದೊಡ್ಡದೊಂದು ಮಿಂಚು ಮಿಂಚಿ ಆ ಪ್ರಾಂತವೆಲ್ಲ ಬೆಳ್ಳಂ ಬೆಳಕಾಯಿತು, ಚಂದ್ರವರ್ಮನು ಆಶ್ಚರ್ಯಪಡುತ್ತ ಗುಹೆಯ ದ್ವಾರದ ಹತ್ತಿರ ಬಂದು ಹೊರಗೆ ಬಗ್ಗಿ ನೋಡಿದನು.

ಸಮೀಪದಲ್ಲಿದ್ದ ಬಿದಿರು ಹಿಂಡಿನ ಹಿಂದಿನ ಭಾಗದಲ್ಲಿ ಅಗ್ನಿಪಕ್ಷಿ ಇರುವುದು ಕಾಣಿಸಿತು. ಕಾಲನಾಗವು ಕೋರೆ ಹಲ್ಲುಗಳನ್ನು ತೋರಿಸುತ್ತಾ ಅದರ ಮೇಲೆ ಹಾರುವುದನ್ನೂ ನೋಡುವಾಗ ಅವನಿಗೆ ರೋಮಾಂಚನವಾಯಿತು.

"ಓಹ್! ಕಾಪಾಲಿನಿ! ಅಗ್ನಿಪಕ್ಷಿಯ ಮೇಲೆ ನಿನ್ನ ಕಾಲನಾಗ ಕಲೆಬಿದ್ದಿದೆ. ನಾನು ಹೋಗಿ ಕಾಲ



ನಾಗನಿಗೆ ಸಹಾಯಮಾಡುತ್ತೇನೆ. ಮೊದಲೇ ಗಂಡಭೇರುಂಡಗಳೊಂದಿಗೆ ಹೋರಾಡಿದವನು. ನನಗೆ ಇದೊಂದು ಒಳ್ಳೆಯ ಸಂದರ್ಭ" ಎಂದನು ಚಂದ್ರವರ್ಮ.

"ಬೇಡ ವರ್ಮಾ, ಬೇಡ ಬೇಡ!" ಎನ್ನುತ್ತಾ ಕಾಪಾಲಿನಿ ಗುಹೆಯೊಳಗಿನಿಂದ ಮುಖದ್ವಾರದ ಹತ್ತಿರ ಬಂದು ಹೊರಗೆ ನೋಡುತ್ತ, "ಆ ಶಂಖನ ಭೃತ್ಯ ಅಗ್ನಿಪಕ್ಷಿಯನ್ನು ಕಾಲನಾಗವು ಹತಮಾಡಿ ಬಿಡುತ್ತದೆಂದು ನನಗೆ ನಂಬುಗೆ ಇದೆ. ಹಾಗಾಗ ದಿದ್ದರೆ ನಿನಗೂ ನನಗೂ ಅಪಾಯವು ತಪ್ಪದು. ಗಂಡಭೇರುಂಡ ಪಕ್ಷಿಗಳು ನನ್ನನ್ನು ತಂದು ಈ ಸ್ಥಳದಲ್ಲಿ ಹಾಕಿದುವೆಂದು ಅಗ್ನಿಪಕ್ಷಿಗೆ ಗೊತ್ತಾಗಿರ ಬೇಕು. ಕಾಲನಾಗವು ಗಂಡಭೇರುಂಡಗಳನ್ನು ಕೊಂದುದನ್ನೂ ಅದು ನೋಡಿರಬೇಕು. ಆ ಸಂಗತಿ ಯನ್ನು ಅದು ತನ್ನ ಯಜಮಾನನ ಮುಂದೆ ಹೇಳುವುದಕ್ಕೆ ಮೊದಲೇ ಅದು ಸತ್ತುಹೋದರೆ ಒಳ್ಳೇದಿತ್ತು. ಅದಕ್ಕಾಗಿ ನೀನು ದುಡುಕಿ ಮುಂದೆ ಹೋಗಬೇಡಪ್ಪ. ನಿನಗೂ ಏನಾದರೂ ಆದರೆ ನನಗಾರು ದಿಕ್ಕು?" ಎಂದಳು.

ಇಷ್ಟರೊಳಗೆ ಅಗ್ನಿಪಕ್ಷಿಯೂ, ಕಾಲನಾಗವೂ ಒಂದನ್ನೊಂದು ಹತಮಾಡಲು ಹೆಣಗುವ ಹೋರಾ ಟವು ಮಹಾ ಭಯಂಕರವಾಯಿತು. ಅಗ್ನಿಪಕ್ಷಿ ತನ್ನ ಹರಿತವಾದ ಮೂಗಿನಿಂದ, ಕಾಲುಗುರುಗಳಿಂದ ಕಾಲ ನಾಗದಿಂದ ತಪ್ಪಿಸಿಕೊಂಡು ಜಾರುತ್ತಲೇ, ಕಾಲ ನಾಗವು ತನ್ನ ಕೋರೆ ಹಲ್ಲುಗಳಿಂದ ಅಗ್ನಿಪಕ್ಷಿಯ ಕುತ್ತಿಗೆಯನ್ನು ಕಡಿಯಲು ನೋಡುತ್ತಿತ್ತು. ಅಗ್ನಿ ಪಕ್ಷಿಯ ಶರೀರದಿಂದ ಹೊರಡುವ ಬೆಂಕಿಯ ಉರಿಗಳು ಕಾಲನಾಗದ ಶರೀರವನ್ನು ಬೇಯಿಸುವ ಹಾಗೆ ಕಾಣುತ್ತಿತ್ತು. ಕಾಲನಾಗದ ಬಾಯಿಯಿಂದ ಹೊರಡುವ ವಿಷವಾಯುವಿನ ಹೊಡೆತಕ್ಕೆ ಅಗ್ನಿ ಪಕ್ಷಿಗೆ ಕಣ್ಣುಕತ್ತಲೆ ಬರುತ್ತಿತ್ತು. ಬಿದ್ದುಹೊರಳಿ ಎದ್ದು ಮತ್ತೆ ಹೋರಾಡುತ್ತಿತ್ತು ಅಗ್ನಿಪಕ್ಷಿ. ಎರಡೂ ಸರಿಸಮಾನದಂತಿದ್ದುವು.

"ಇಲ್ಲಿ ನಡೆಯುವ ಈ ಜಗಳದ ಗಲಾಟೆ ಶಂಖ ನಿಗೆ ತಿಳಿದುಬಿಟ್ಟರೆ ನಾವಿಬ್ಬರೂ ಅವನ ಕೈಗೆ ಸಿಕ್ಕಿ ಹೋದಂತೆ ತಾನೇ?" ಎಂದನು ಚಂದ್ರವರ್ಮ.

"ಹಾಗೆ ನಡೆಯುವ ಸಂಭವವಿಲ್ಲಪ್ಪಾ. ತನ್ನ ವಿಶ್ವಾಸದ ಭೃತ್ಯ ಅಗ್ನಿಪಕ್ಷಿ ರಾತ್ರಿಯಲ್ಲಿ ಕಾವಲಿರು ವಾಗ ತನಗೆ ಯಾವ ಅಪಾಯವೂ ಬರುವುದಿಲ್ಲ ವೆಂದು ಶಂಖನು ತಿಳಿದುಕೊಂಡಿದ್ದಾನೆ. ಆದುದರಿಂದ ಅವನು ಕತ್ತಲೆಬಂದ ಕೂಡಲೇ ನಿಶ್ಚಿಂತೆಯಿಂದ ಮಲಗಿ ನಿದ್ದೆಮಾಡಿಬಿಡುತ್ತಾನೆ. ಮತ್ತೆ ಬೆಳಗಾಗು ವುದಕ್ಕೆ ಸ್ವಲ್ಪ ಮೊದಲು ನಿದ್ದೆಯಿಂದ ಏಳುತ್ತಾನೆ. ಅವನ ಎಲ್ಲಾ ಅಭ್ಯಾಸವೂ ರಿವಾಜುಗಳೂ ನನಗೆ ಗೊತ್ತಿವೆ" ಎಂದಳು ಕಾಪಾಲಿನಿ.

ಅಷ್ಟರಲ್ಲಿ ಅಗ್ನಿಪಕ್ಷಿ ದೊಡ್ಡ ದನಿಯಿಂದ ಕೂಗಲು ನೋಡಿತು. ಆದರೆ ಹೊರಟ ಶಬ್ದವು ಬರೀ

"ಕೀಚ್" ಎಂದಿತಷ್ಟೇ. ಆಗಲೇ ಅದರ ತಲೆ ಜೋಲಾಡತೊಡಗಿತು. ಕಾಲನಾಗವು ತನ್ನ ಮೂರು ತಲೆಗಳಿಂದ ಅದರ ಕುತ್ತಿಗೆಯನ್ನು ಬಿಗಿದು ಅದರ ತಲೆಯನ್ನು ಪೂರ್ತಿ ಜೋಲಾಡಿಸಿ, ಆಮೇಲೆ ತನ್ನ ಪಟ್ಟು ಬಿಟ್ಟಿತು. ಅಗ್ನಿಪಕ್ಷಿ ಪಕ್ಕಕ್ಕೆ ಹೊರಳಿ ಕೌಚಿಕೊಂಡು ಅಚಲವಾಯಿತು.

"ಜೈ ಕಾಲನಾಗೂ! ವೀರನಾಗೂ!" ಎಂದು ಚಪ್ಪಾಳೆ ತಟ್ಟಲು ನೋಡಿದ ಚಂದ್ರವರ್ಮನು ಹಾಗೇನೂ ಮಾಡದೆ ಗುಹೆಯಿಂದ ಹೊರಗೆ ಹಾರಿದನು. ಕಾಪಾಲಿನಿ ಕೂಡಾ ಬಹಳ ಉತ್ಸಾಹದಿಂದ ಇದ್ದ ಬಲವನ್ನೆಲ್ಲ ಒಟ್ಟುಗೂಡಿಸಿ ಚಂದ್ರವರ್ಮನ ಹಿಂದೆಯೇ ಹೊರಗೆ ಬಂದಳು.

ಅವರಿಬ್ಬರೂ ಕಾಲನಾಗದ ಬಳಿಗೆ ಬಂದಾಗ, ಕಾಲನಾಗವು ಅತ್ಯಾಯಾಸದಿಂದ ತಟಸ್ಥವಾಗಿ ಬಿದ್ದುಕೊಂಡಿತ್ತು. ಇಬ್ಬರೂ ತನ್ನ ಹತ್ತಿರ ಬಂದುದನ್ನು ನೋಡಿ ಗೌರವಸೂಚನೆಯಾಗಿ ತಲೆಗಳನ್ನು ತುಸು ಮೆಲ್ಲಗೆ ಆಡಿಸಿತು.

ಚಂದ್ರವರ್ಮನು ಆಪ್ಯಾಯತೆಯಿಂದ ಅದರ ಶರೀರವನ್ನು ನೀವಿದನು. ಅಗ್ನಿಪಕ್ಷಿಯ ರೆಕ್ಕೆಗಳಿಂದ ಹೊರಡುವ ಬೆಂಕಿಯ ಉರಿಗಳಿಂದ ಕಾಲನಾಗದ ಶರೀರವು ಕರ್‍ರಗೆ ಸುಟ್ಟು ಕೆಲವು ಕಡೆ ಗುಳ್ಳೆಗಳೆದ್ದು ಒಡೆದು ಚರ್ಮ ಕಿತ್ತಿತ್ತು. ತನ್ನ ಸೇವಕನ ದುಸ್ಥಿತಿಯನ್ನು ನೋಡಿ ಕಾಪಾಲಿನಿ ಅಯ್ಯೋ ಅಂದುಕೊಂಡು ಪ್ರೇಮದಿಂದ ಅದರ ತಲೆಗಳನ್ನು ಸವರುತ್ತ, "ಕಾಲನಾಗಾ! ಇವತ್ತಿಗೆ ನಿನ್ನ ಕಷ್ಟವೆಲ್ಲಾ ತೀರುತ್ತದೆ. ಶಂಖ ಮಾಂತ್ರಿಕನ ಅರ್ಧ ಬಲವು ನಿನ್ನಿಂದ ಮುರಿದುಹೋಯಿತು. ಇನ್ನು ಶಂಖನ ಮಂತ್ರ ಗೃಹದಿಂದ ಅಪೂರ್ವ ಶಕ್ತಿಗಳ ಶಂಖವು ಕೈಸೇರಿದ ಕೂಡಲೇ ನಿನಗೆ ಮಾನವ ರೂಪ ಬರಿಸುತ್ತೇನಪ್ಪ. ಆಮೇಲೆ ನಿನಗೆ ಪೂರ್ತಿ ಸ್ವತಂತ್ರವೇ. ನಿನ್ನ ಇಷ್ಟಬಂದ ಕಡೆಗೆ ಹೋಗಬಹುದು" ಎಂದಳು.

ಶಂಖನ ಮಂತ್ರಗೃಹದ ಸಂಗತಿ ಕೇಳುತ್ತಲೇ ಚಂದ್ರವರ್ಮನು ಅದುರಿಬಿದ್ದನು. ಅವನ ದೃಷ್ಟಿ





ಪೂರ್ವದಿಕ್ಕಿನ ಕಡೆಗೆ ಹೋಯಿತು. "ಕಾಪಾಲಿನೀ! ಸೂರ್ಯೋದಯವಾಗಲಿಕ್ಕೆ ಇನ್ನು ಹೆಚ್ಚು ಹೊತ್ತು ಇಲ್ಲ. ಈಗ ನಾನು ಆ ಶಂಖಿನ ಪೂಜಾಮಂದಿರದೊಳಗೆ ಹೋಗಿ ಅಲ್ಲಿನ ಸಮಾಚಾರ ನೋಡುತ್ತೇನೆ" ಎಂದನು.

ಕಾಪಾಲಿನಿ ಕೂಡಾ ಮೂಡು ದಿಕ್ಕಿನ ಕಡೆಗೆ ನೋಡಿ, "ಚಂದ್ರವರ್ಮಾ, ನೀನು ಈ ಹೊತ್ತಿನಲ್ಲಿ ಅವನ ಮಂತ್ರಗೃಹದೊಳಗೆ ಪ್ರವೇಶಿಸುವುದು ಕ್ಷೇಮವಲ್ಲ. ಅವನನ್ನು ಕಡೆ ಮುಟ್ಟಿಸಲು ನಾನೊಂದು ಪ್ರತ್ಯೇಕ ಉಪಾಯವನ್ನು ಆಲೋಚಿಸಿದ್ದೇನೆ" ಎಂದಳು.

"ಅದೇನು?" ಕೇಳಿದನು ಚಂದ್ರವರ್ಮ.

"ಶಂಖ ಮಾಂತ್ರಿಕನು ಪ್ರತಿದಿನ ಸೂರ್ಯೋದಯದ ವೇಳೆಯಲ್ಲಿ ಮೂಡು ದಿಕ್ಕಿನಲ್ಲಿರುವ ಬೆಟ್ಟದ ಅಂಚಿಗೆ ಹೋಗಿ, ಅಲ್ಲಿರುವ ಒಂದು ಬಂಡೆಗಲ್ಲ ಮೇಲೆ ನಿಂತುಕೊಂಡು, ಎಲ್ಲಾ ದಿಕ್ಕುಗಳಿಗೂ ಗಿರ್ರನೆ ತಿರುಗುತ್ತ ಮಂತ್ರೋಚ್ಚಾರಣೆ ಮಾಡುತ್ತಾನೆ. ಆ ಕಲ್ಲು ಅಡಿಭಾಗದಲ್ಲಿ ಅಗಲವಾಗಿದೆ. ಒಂದಡಿಯಷ್ಟು ಎತ್ತರವಿರುತ್ತದೆ. ಅದರ ಕೆಳಭಾಗದಲ್ಲಿ ಸುಮಾರು ಸಾವಿರ ಅಡಿಗಳಷ್ಟು ಆಳವಿರುವ ಪ್ರಾಣಾಂತಕವಾದ ದೊಡ್ಡ ಅಗಾಧವಿದೆ. ನಾನು ಹೇಳಿದಹಾಗೆ ಮಾಡಲು ಸಾಧ್ಯವಾದರೆ ಶಂಖನನ್ನು ಆ ಕಲ್ಲಿನ ಮೇಲಿನಿಂದ ಕೆಳಗಿರುವ ಅಗಾಧದೊಳಗೆ ಬೀಳಿಸಿ, ಅವನ ಶರೀರವು ಅಲ್ಲಿರುವ ಚೂಪಾದ ಮೊರಟು ಕಲ್ಲುಗಳ ಮೇಲೆ ಬೀಳುವಂತೆ ಮಾಡಿದರೆ ತೀರಿತು. ಅವನ ಶರೀರವೆಲ್ಲಾ ಚೂರು ಚೂರಾಗಿ ಹೋಗುತ್ತದೆ. ಅವನ ಕಣ್ಣಮುಂದೆ ನಿಲ್ಲುವುದು ಅಷ್ಟು ಒಳ್ಳೆಯದಲ್ಲ. ಏಕೆಂದರೆ ಅವನ ದೃಷ್ಟಿಯಲ್ಲಿಯೂ ಮಂತ್ರಗಳಿವೆ!" ಎಂದಳು ಕಾಪಾಲಿನಿ.

"ಅವನನ್ನು ಬೀಳಿಸುವ ಉಪಾಯವೇನು ಕಾಪಾಲಿನೀ?" ಎಂದು ಚಂದ್ರವರ್ಮನು ಉತ್ಸಾಹದಿಂದ ಕೇಳಿದನು.

"ಹೇಳುತ್ತೇನೆ. ಹತ್ತಿರ ಬಾ" ಎಂದಳು ಕಾಪಾಲಿನಿ. ಅವನು ಅವಳ ಹತ್ತಿರಹೋದ ಕೂಡಲೇ ಅವನ ಕಿವಿಯಲ್ಲಿ ಏನೋ ರಹಸ್ಯವನ್ನು ಹೇಳಿ, "ಇದು ತುಂಬಾ ಗೋಪ್ಯವಾಗಿ ನೆರವೇರಿಸಬೇಕಾದ ಕಾರ್ಯ. ಸ್ವಲ್ಪ ಮಾತ್ರ ತಪ್ಪು ನಡೆದರೂ ಸರ್ವನಾಶವಾದೀತು!" ಎಂದಳು.

ಚಂದ್ರವರ್ಮನು ಕ್ಷಣಕಾಲ ಆಲೋಚಿಸುತ್ತಾ ನಿಂತು, ಆಮೇಲೆ ಪಕ್ಕದಲ್ಲಿದ್ದ ಒಂದು ಮರದ ಮೇಲೆ ಹತ್ತಿ, ಪೂರ್ವದಿಕ್ಕಿನ ಕಡೆಗೆ ಪರೀಕ್ಷಿಸಿ ನೋಡಿ ಕೆಳಗಿಳಿದು ಕಾಪಾಲಿನಿಯೊಂದಿಗೆ, "ಕಾಪಾಲಿನೀ! ಸೂರ್ಯೋದಯವಾಗಲು ಇನ್ನು ಬಹಳ ಹೊತ್ತೇನಿಲ್ಲ. ನನ್ನ ಕೆಲಸ ನಾನು ಮಾಡುತ್ತೇನೆ. ನೀನೂ ಕಾಲನಾಗವೂ ಗುಹೆಯಲ್ಲಿ ವಿಶ್ರಾಂತಿ ಪಡೆದುಕೊಂಡಿರಿ" ಎಂದು ಹೇಳಿ ಅವಳು ಹೇಳಿ

ದಂತೆ ಮಾಡಲು ಒರೆಯಿಂದ ಕತ್ತಿಯನ್ನು ಸೆಳೆದು ಕೊಂಡು ಮರಗಳ ಗುಂಪಿನೊಳಗೆ ಹೋದನು.

ಮರಗಳ ಗುಂಪಿನಲ್ಲಿ ಅವನು ಕತ್ತಿಯಿಂದ ಕಡಿಯುವ ಶಬ್ದ ಒಂದೇ ಸಮನೆ ಕೇಳ ತೊಡಗಿತು. ನೋಡುತ್ತಿದ್ದ ಹಾಗೆ ಅವನು ಕಡಿ ಗಡಿದು ಹಾಕಿದ ಬಳ್ಳಿಗಳ ದೊಡ್ಡದೊಂದು ರಾಶಿ ಯಾಯಿತು. ಆಮೇಲೆ ಅವನು ಆ ಬಳ್ಳಿಗಳನ್ನೆಲ್ಲಾ ಒಂದಕ್ಕೊಂದು ಕಟ್ಟತೊಡಗಿದನು. ಸ್ವಲ್ಪಹೊತ್ತಿಗೆ ಬಹಳ ಉದ್ದವಾದ ಬಳ್ಳಿಯ ಬಲಿಷ್ಠ ಹಗ್ಗವು ತಯಾರಾಯಿತು. ಚಂದ್ರವರ್ಮನು ಹೀಗೆ ತಯಾರಾದ ಬಳ್ಳಿ ಹಗ್ಗದ ಒಂದು ಕೊನೆಯನ್ನು ಭುಜದ ಮೇಲೆ ಹಾಕಿಕೊಂಡು ಬೇಗಬೇಗನೆ ಬೆಟ್ಟವನ್ನು ಹತ್ತಿ, ಅದರ ಮೂಡು ದಿಕ್ಕಿನ ಅಂಚಿ ನಲ್ಲಿರುವ ಕಲ್ಲಿಗೆ ಬಳ್ಳಿ ಹಗ್ಗವನ್ನು ಕಟ್ಟಿದನು. ಶಂಖ ಮಾಂತ್ರಿಕನು ಪ್ರತಿದಿನ ಸೂರ್ಯೋದಯಕ್ಕೆ ಸ್ವಲ್ಪ ಮೊದಲು ಆ ಕಲ್ಲಿನ ಮೇಲೆ ನಿಂತುಕೊಂಡು ಎಲ್ಲಾ ದಿಕ್ಕುಗಳಿಗೆ ತಿರುಗುತ್ತ ಮಂತ್ರೋಚ್ಚಾರ ಮಾಡುತ್ತಾನೆ.

ತನ್ನ ಕೆಲಸ ಮುಗಿದ ಕೂಡಲೇ ಚಂದ್ರವರ್ಮನು ಬೆಟ್ಟವನ್ನಿಳಿದು ಕಾಪಾಲಿನಿಯ ಗುಹೆಯ ಹತ್ತಿರ ಬಂದನು. ಗುಹೆಯ ಹತ್ತಿರ ಅವನು ಬರುವಾಗಲೇ ಕಾಪಾಲಿನಿ ಹೊರಗೆ ಬಂದು "ಚಂದ್ರವರ್ಮಾ, ಕೆಲಸ ವನ್ನು ಸರಿಯಾಗಿ ನೆರವೇರಿಸಿರುವೆಯಾ?" ಎಂದು ಕೇಳಿದಳು.

"ಮಾಡಬೇಕಾದ ಹಾಗೆ ಮಾಡಿದ್ದೇನೆ. ಫಲಿತ ಹೇಗಾಗುವುದೋ ನೋಡಬೇಕು. ಬಳ್ಳಿ ಹಗ್ಗದ ಒಂದು ಕೊನೆಯನ್ನು ಆ ಕಲ್ಲಿಗೆ ಕಟ್ಟಿದ್ದೇನೆ. ಎರಡನೇ ಕೊನೆ ಬೆಟ್ಟದ ಕೆಳಭಾಗದಲ್ಲಿದೆ. ಆದರೆ ನನಗೆ ಒಂದು ಸಂದೇಹ ಬರುತ್ತದೆ. ನಾವು ಆ ಕಲ್ಲನ್ನು ಮೂಡು ದಿಕ್ಕಿಗೆ ದೂಡಿದರೆ ತಾನೇ ಅದು ಶಂಖ ಮಾಂತ್ರಿಕನನ್ನು ಅಗಾಧದೊಳಗೆ ತಳ್ಳಿ ಚೂರು



ಚೂರು ಮಾಡುತ್ತದೆ?" ಎಂದು ಕೇಳಲು, "ಅದುವೋ ನಿನ್ನ ಅನುಮಾನ?" ಎಂದು ಕಾಪಾಲಿನಿ ಮುಗುಳುನಗು ನಕ್ಕು "ಸರಿ, ಶಂಖನು ಆ ಕಲ್ಲಿನ ಮೇಲೆ ಏರಿದ ಕೂಡಲೇ ನೀನು ಎಳೆಯ ಬೇಕಾದ ಬಳ್ಳಿ ಹಗ್ಗದ ಕೊನೆ ಎಲ್ಲಿರುವುದೆಂದು ನನಗೆ ತೋರಿಸು. ನಿನ್ನ ಅನುಮಾನವನ್ನು ನಿವಾರಣೆ ಮಾಡುತ್ತೇನೆ" ಎಂದಳು.

ಚಂದ್ರವರ್ಮನು ಕಾಪಾಲಿನಿಯನ್ನು ಕರೆದು ಕೊಂಡು ಆ ಕಡೆಗೆ ಹೋದನು. ಬೆಟ್ಟದ ಪಾರ್ಶ್ವಕ್ಕೆ ಹೋಗಿ ಅಲ್ಲಿರುವ ಬಳ್ಳಿ ಹಗ್ಗದ ಎರಡನೇ ಕೊನೆ ಯನ್ನು ಅವಳಿಗೆ ತೋರಿಸಿದನು. ಅವಳು ಅದನ್ನು ಮುಟ್ಟಿ ನೋಡಿ, ಏನೋ ಗೊಣಗಿ, ಮೂಡು ದಿಕ್ಕಿನಲ್ಲಿರುವ ಬೆಟ್ಟದ ಅಂಚನ್ನು ನೋಡುತ್ತ, "ವರ್ಮಾ, ಶಂಖನು ಮಂತ್ರೋಚ್ಚಾರ ಮಾಡಲು ಹತ್ತಿ ನಿಲ್ಲುವ ಆ ಕಲ್ಲನ್ನು ಸ್ವಲ್ಪಮಾತ್ರ ಪಕ್ಕಕ್ಕೆ ಕದಲಿಸಿದರೂ ಅದು ಅಲ್ಲಿ ಕೆಳಗಿನ ಅಗಾಧಕ್ಕೇ

ಬಿದ್ದುಬಿಡುತ್ತದೆ. ಈ ವಿಷಯದಲ್ಲಿ ಯಾವ ಅನುಮಾನಕ್ಕೂ ಎಡೆಯಿಲ್ಲ." ಎಂದು ಹಠಾತ್ತನೆ ಕಣ್ಣುಗಳನ್ನು ಇಷ್ಟಗಲಕ್ಕೆ ಅರಳಿಸಿ, ಚಂದ್ರವರ್ಮನ ಕಡೆಗೆ ಸನ್ನೆಮಾಡುತ್ತ, "ಅಕೋ ಶಂಖ ! ಕೈಯಲ್ಲಿ ತಳತಳ ಹೊಳೆಯುವ ಮಂತ್ರದಂಡ ಕಾಣುತ್ತದಷ್ಟೆ ? ಅವನು ಆ ಕಲ್ಲಿನ ಮೇಲೆ ಹತ್ತಿನಿಂತ ಮರುಕ್ಷಣದಲ್ಲೇ ನೀನು ಈ ಬಳ್ಳಿ ಹಗ್ಗವನ್ನು ಎಳೆಯಬೇಕು" ಎಂದಳು ಮೆಲ್ವನಿಯಿಂದ.

ಚಂದ್ರವರ್ಮನು ಬೆಟ್ಟದ ಮೇಲೆ ನೋಡಿದನು. ಆಗತಾನೇ ಮೂಡಣಾಗಸವು ಬೆಳಕಿನ ಛಾಯೆಯನ್ನು ತಾಳುತ್ತಿತ್ತು. ಆ ಎಳೆ ಬೆಳಕಿನಲ್ಲಿ ಶಂಖ ಮಾಂತ್ರಿಕನ ವಿಕೃತಾಕಾರವು ಚಲಿಸುವುದು ಕಂಡಿತು. ಅವನನ್ನು ನೋಡಿದ ಕೂಡಲೇ, ಮಹಾ ಮಾಂತ್ರಿಕಳಾದ ಕಾಪಾಲಿಯನ್ನೇ ಹೆದರಿಸುವಂತಹ ಈ ಶಂಖನ ಶಕ್ತಿ ಎಂತಹುದೋ ಎಂದುಕೊಂಡು ರೋಮಾಂಚಿತನಾದನು. ಮರುಕ್ಷಣದಲ್ಲಿ ಗುಂಡಿಗೆ ಗಟ್ಟಿಮಾಡಿಕೊಂಡು ಬಳ್ಳಿ ಹಗ್ಗದ ಕೊನೆಯನ್ನು ಎರಡು ಕೈಗಳಲ್ಲಿ ಗಟ್ಟಿಯಾಗಿ ಹಿಡಿದುಕೊಂಡನು.

ಆಗಲೇ ಶಂಖನು ಬೆಟ್ಟದ ಅಂಚಿಗೆ ಬಂದು ಅಲ್ಲಿರುವ ಕಲ್ಲಿನ ಮೇಲೆ ಹತ್ತಿ ನಿಂತು ಮಂತ್ರದಂಡವನ್ನು ಉದಯಿಸುವ ಸೂರ್ಯನ ಕಡೆಗೆ ಎತ್ತಿದನು. "ವರ್ಮಾ ! ಉಂ. ಇದೇ ಸರಿಯಾದ ಸಮಯ. ಬಳ್ಳಿ ಹಗ್ಗವನ್ನು ಒಮ್ಮೆಗೇ ಎಳೆದು ಬಿಟ್ಟುಬಿಡು. ಈಚೆಗೆ ಓಡಿಬಂದು ಬಿಡು" ಎಂದಳು ಕಾಪಾಲಿನಿ ಆತುರದಿಂದ.

ಚಂದ್ರವರ್ಮನು ಎರಡು ಕೈಗಳಿಂದಲೂ ಬಳ್ಳಿ ಹಗ್ಗವನ್ನು ಬಲವಾಗಿ ಒಂದುಸಾರಿ ಎಳೆದು ಥಕ್ಕನೆ ಬಿಟ್ಟುಬಿಟ್ಟನು. ಉತ್ತರ ಕ್ಷಣದಲ್ಲಿ ಶಂಖನು ಕೈಗಳೆರಡನ್ನೂ ಮೇಲೆತ್ತಿ ಆಡಿಸುತ್ತಾ, ಕಾಲುಗಳಿಂದ ಗಾಳಿಯನ್ನು ಮಥಿಸುತ್ತಾ. "ಓಹೋ ! ಮೋಸ ! ದ್ರೋಹ !" ಎಂದು ಕರ್ಕಶಕಂಠದಿಂದ ಕೂಗಿದನು. ಆಗ ಅವನು ಬಿಸುಟ ಮಂತ್ರದಂಡವು ಮಿಂಚಿನ ವೇಗದಲ್ಲಿ ಹೋಗಿ ಮಂತ್ರಗೃಹವನ್ನು ತಾಗಿತು. ಮಂತ್ರಗೃಹವು ಇದ್ದಕ್ಕಿದ್ದ ಹಾಗೆ ಬುನಾದಿಯೊಂದಿಗೆ ಆಕಾಶದಲ್ಲೆದ್ದು ದೊಡ್ಡ ಶಬ್ದದೊಂದಿಗೆ ಸರೋವರದ ಮಧ್ಯದಲ್ಲಿ ಬಿತ್ತು. ಸರೋವರದ ನೀರು ಆಕಾಶಕ್ಕೆ ಹಾರಿ ಮಳೆಯಂತೆ ಎಂಟು ಸುತ್ತಲೂ ಸುರಿಯಿತು. ಈ ಭಯಂಕರದಿಂದ ಹಕ್ಕಿಗಳೆಲ್ಲಾ ಹೆದರಿ ದಿಕ್ಕುಗಳಿಗೆ ಹಾರಿದುವು. ಅವುಗಳ ಕೂಗಾಟ ಕಿರಿಚಾಟಗಳಿಂದ ಆಕಾಶವೆಲ್ಲಾ ತುಂಬಿತು.

ಇಷ್ಟರೊಳಗೆ ಶಂಖ ಮಾಂತ್ರಿಕನು ಬೆಟ್ಟದ ಕೆಳಗಿನ ಅಗಾಧದೊಳಗೆ ತಲೆ ಕೆಳಗಾಗಿ ಬಂಡೆಗಲ್ಲುಗಳಿಗೆ ಹೊಡೆದುಕೊಂಡು ಬಿದ್ದುಹೋದನು. ಅವನ ಕೂಗೂ ಅಡಗಿತು. (ಇನ್ನೂ ಇದೆ)





# ವರ್ಚಸ್ಸು

ಹಟಬಿಡದೆ ಹಾರಿ ಓಡುವ ಬೇತಾಳವನ್ನು, ಅದಕ್ಕಿಂತ ಹೆಚ್ಚಿನ ಹಟಗಾರನಾದ ರಾಜಾ ತ್ರಿವಿಕ್ರಮನು ಆ ಮರದ ಬಳಿಗೆ ಹೋಗಿ, ನೇತಾಡುವ ಬೇತಾಳಾವೇಶಿತ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಈ ಅರ್ಧ ರಾತ್ರಿಯ ಹೊತ್ತಿನಲ್ಲಿ ಶ್ರದ್ಧೆಬಿಡದೆ ಕಾರ್ಯತತ್ಪರನಾಗುವ ನೀನು ಪರೋಪಕಾರಿ ಎನ್ನಲು ಸಂದೇಹವೇ ಬೇಡವೆನಿಸಿದರೂ ಗಟ್ಟಿಯಾಗಿ ಹಾಗೆನ್ನಲು ಸಾಧ್ಯವಿಲ್ಲ, ಏಕೆಂದರೆ, ಮನುಷ್ಯ ಸ್ವಭಾವವು ವಿಚಿತ್ರವಾದುದಷ್ಟೇ ಅಲ್ಲದೆ, ಬಹಳ ಜಟಿಲವಾದುದಾಗಿಯೂ ಇರುತ್ತದೆ. ಎಂಥವರಿಗಾದರೂ ಇತರರನ್ನು ಪೂರ್ತಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗದು. ತಮ್ಮನ್ನು ತಾವೇ ಅರ್ಥಮಾಡಿಕೊಳ್ಳುವವರೂ ಬಹುವಿರಳ. ಹಾಗಿದ್ದರೂ ಅವರು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡೆವೆಂದು ಭ್ರಮಿಸಿಕೊಂಡು ಪ್ರವರ್ತಿಸುವುದರಿಂದಲೇ ಈ ಜಗನ್ನಾಟಕವು

ಬೇತಾಳಕಥೆಗಳು?...



ಸಾಗಿಕೊಂಡು ಹೋಗುತ್ತದೆ. ಇದಕ್ಕೆ ಉದಾಹರಣೆಯಾಗಿ ಶ್ರೀಪಾಲನೆಂಬವನ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ಹೋದರೆ ನಡೆಯುವ ಕಷ್ಟ ಗೊತ್ತಾಗಲಾರದು" ಎಂದು ಕಥೆಯನ್ನು ಹೇಳಲು ತೊಡಗಿತು:

ಒಂದು ಗ್ರಾಮದಲ್ಲಿ ಶೀತಳನೆಂಬವನು ಸ್ವಂತ ಊರಿನಲ್ಲಿಯೇ ವ್ಯವಸಾಯ ಮಾಡಿಕೊಂಡು ಜೀವಿಸುತ್ತಿದ್ದನು. ಅವನಿಗೆ ಹಟವು ಹೆಚ್ಚೆಂದು ಎಲ್ಲರೂ ಹೇಳಿಕೊಂಡಿದ್ದರು. ಹಾಗಿರುವಾಗ ಅವನಿಗೊಂದು ವಿಶೇಷ ಸಂಗತಿ ಗೊತ್ತಾಯಿತು. ರಾಜಧಾನೀ ನಗರದಲ್ಲಿ ಒಂದು ಕಡೆ ಹೊಸದೊಂದು ಭವನವನ್ನು ಎಬ್ಬಿಸಲು ಬುನಾದಿ ಅಗೆಯುತ್ತಿರುವಾಗ, ಭೂಮಿಯೊಳಗಿಂದ ಒಂದು ಸಿಂಹಾಸನವು ಮೇಲೆದ್ದುದೇ ಆ ವಿಶೇಷ. ಅದರ ಮೇಲೆ ಕುಳಿತವನಿಗೆ ತಾತ್ಕಾಲಿಕವಾಗಿ ದೊಡ್ಡ ದೊಡ್ಡ ಮಂತ್ರಶಕ್ತಿಗಳು ಬಂದು ಬಿಡುತ್ತವಂತೆ!

ಆ ಸಿಂಹಾಸನವು ಕೆಲವು ನೂರು ವರ್ಷಗಳ ಹಿಂದೆ ಪ್ರಪಂಚವನ್ನು ಗಡಗಡನೆ ನಡುಗಿಸಿದ ಶಕ್ತಿರೂಪನೆಂಬ ಮಾಂತ್ರಿಕನದು, ಅಗೆಯುವಾಗ ಅದು ಹೊರಬಿದ್ದ ಕೂಡಲೇ ಮಹಾರಾಜನು ಆ ಸಿಂಹಾಸನದ ಪೂರ್ವ ವೃತ್ತಾಂತವನ್ನು ಶೋಧಿಸಿ ತಿಳಿದು, ಅದನ್ನು ಕೋಟೆಯೊಳಗಿನ ಒಂದು ಪ್ರತ್ಯೇಕ ಭವನಕ್ಕೆ ಸಾಗಿಸಿ, ಅಲ್ಲಿ ಇರಿಸಿದ್ದನು. ಅದನ್ನು ನೋಡಲು ಜನರು ಸಾಲು ಸಾಲಾಗಿ ರಾಜಧಾನಿಗೆ ಹೋಗುತ್ತಿದ್ದರು.

ಶೀತಳನಿಗೆ ಕೂಡಾ ರಾಜಧಾನಿಗೆ ಹೋಗಿ ಆ ಸಿಂಹಾಸನವನ್ನು ನೋಡಬೇಕೆಂದು ತೋರಿತು. ಅದರ ವಿಷಯವಾಗಿ ಎಷ್ಟೋ ಅದ್ಭುತ ವಿಷಯಗಳನ್ನು ಜನರು ಕಥೆಗಳಾಗಿ ಹೇಳುತ್ತ ಪ್ರಚಾರ ಪಡಿಸುತ್ತಿದ್ದರು. ತದೇಕ ದೃಷ್ಟಿಯಿಂದ ಆ ಸಿಂಹಾಸನವನ್ನು ನೋಡುತ್ತಾ ಇದ್ದರೆ, ಅದರ ಮೇಲೆ ಆಸೀನನಾಗಿರುವ ಶಕ್ತಿರೂಪನ ಆಕಾರವು ಒಂದು ಛಾಯೆಯ ಹಾಗೆ ಕಾಣುತ್ತದಂತೆ, ಸಾಧಾರಣವಾಗಿ ಆ ಸಿಂಹಾಸನದ ಮೇಲೆ ಕುಳಿತುಕೊಳ್ಳಲು ಯಾರಿಗೂ ಮನಸ್ಸು ಬಾರದಂತೆ. ಆ ಸಿಂಹಾಸನಕ್ಕೆ ಮೂರು ಪ್ರದಕ್ಷಿಣೆ ಮಾಡಿ, "ಹೇ, ಶಕ್ತಿರೂಪಾ, ನಾನು ನಿನ್ನ ಭೃತ್ಯ. ನಿನ್ನ ದೊಡ್ಡತನವನ್ನು ತಿಳಿಯಲಿಕ್ಕಷ್ಟೇ ಹೊರತು ಬೇರೆ ಯಾವ ಉದ್ದೇಶದಿಂದಲೂ ನಾನು ನಿನ್ನ ಸ್ಥಾನದಲ್ಲಿ ಕುಳಿತುಕೊಳ್ಳುವುದಿಲ್ಲ" ಎಂದು ಮನಸ್ಸಿನಲ್ಲಿ ಅಂದುಕೊಳ್ಳುವವರೇ ಆ ಸಿಂಹಾಸನದಲ್ಲಿ ಕುಳಿತುಕೊಳ್ಳಲು ಸಾಧ್ಯವಾಗುವುದಂತೆ. ಇದೆಲ್ಲಾ ಜನರ ಮಾತಿನ ಮೂಲಕ ಶೀತಳನಿಗೆ ತಿಳಿಯಿತು.

ಆಗ ಅವನಿಗೆ ಶ್ರೀಪಾಲನೆಂಬವನ ನೆನಪು ಬಂತು. ಶ್ರೀಪಾಲನು ಶೀತಳನ ಸಮೀಪದ ಬಂಧು. ಅವನು ರಾಜಾಸ್ಥಾನದಲ್ಲಿ ಪೌರಾಣಿಕ ಉದ್ಯೋಗದಲ್ಲಿದ್ದನು. ದಿನಾ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಅವನು

ರಾಜನ ಮುಂದೆ ಕುಳಿತು ಒಳ್ಳೆಯ ರೀತಿಯಲ್ಲಿ ಪುರಾಣ ಪಠನ ಮಾಡುತ್ತಿದ್ದನು.

ಮಾಂತ್ರಿಕನ ಸಿಂಹಾಸನವನ್ನು ನೋಡಬೇಕೆಂಬ ಕುತೂಹಲದಿಂದ ಶೀತಳನು ರಾಜಧಾನಿಗೆ ಪ್ರಯಾಣ ಮಾಡಿ, ಶ್ರೀಪಾಲನ ಮನೆಗೆ ಹೋದನು. ಶ್ರೀಪಾಲನು ಅವನನ್ನು ಆದರದಿಂದಲೂ ಅಭಿಮಾನದಿಂದಲೂ ಬರಮಾಡಿಕೊಂಡನು.

ಶೀತಳನು ತಾನು ಬಂದ ಕಾರ್ಯವನ್ನು ಕುರಿತು ಆತನೊಂದಿಗೆ ಹೇಳಿದನು. ಅದನ್ನು ಕೇಳಿ ಶ್ರೀಪಾಲನ ಕಣ್ಣುಗಳು ಏಕೋ ಅರಳಿದುವು. ಹಾಗೆಯೇ ಏನೋ ಆಲೋಚನೆಗೆ ಬಿದ್ದಂತೆಯೂ ಕಂಡಿತು.

ಸ್ವಲ್ಪಹೊತ್ತಿನ ಮೇಲೆ ಅವನು ಶೀತಳನನ್ನು ನೋಡಿ, "ಶೀತಳಾ, ನೀನು ಇದಕ್ಕಾಗಿಯೇ ಬಂದವನಾದರೆ ಬಹಳ ತಪ್ಪುಮಾಡಿದೆ. ಈಗ ಆ ಮಾಂತ್ರಿಕನ ಸಿಂಹಾಸನವನ್ನು ಎಲ್ಲರಿಗೂ ನೋಡಲು ಬಿಡುವುದಿಲ್ಲ. ಈ ಹಿಂದೆ ನೋಡಲು ಬಂದವರಲ್ಲಿ ಕೆಲವರು ಹದ್ದುಮೀರಿ ಪ್ರವರ್ತಿಸಿದ ಕಾರಣದಿಂದ, ಈಗ ಬೇಕಾದವರು ಪ್ರತ್ಯೇಕವಾಗಿ ರಾಜನ ಅನುಮತಿ ಪಡೆದವರನ್ನು ಮಾತ್ರವೇ ಅದನ್ನು ನೋಡಲು ಬಿಡುತ್ತಾರೆ. ಅದಕ್ಕೇ ಹೀಗಂದೆನು" ಎಂದನು.

"ಹಾಗಾದರೆ ನೀನು ನನಗೆ ಪ್ರತ್ಯೇಕವಾಗಿ ರಾಜನ ಅನುಮತಿ ಸಂಪಾದಿಸಿ ಕೊಡಲಾರಿಯಾ?" ಎಂದನು ಶೀತಳ.

ಅದಕ್ಕೆ ಶ್ರೀಪಾಲನು ನಗುತ್ತ, "ನಿನ್ನದೊಂದು ಹುಚ್ಚು! ಏನಂದುಕೊಂಡೆಯೋ? ಅದಕ್ಕೆ ದೊಡ್ಡ ವ್ಯಕ್ತಿತ್ವ ಬೇಕು. ಏನೋ ಪುರಾಣ ಪಠನಮಾಡುವ ಸಾಧಾರಣ ಪೌರಾಣಿಕ ಮನುಷ್ಯನು ನಾನು. ನನಗೆ ಅಂತಹ ದೊಡ್ಡ ವರ್ಚಸ್ಸು ಎಲ್ಲಿದೆ?" ಎಂದನು.

ಶೀತಳನು ಏನೂ ಹೇಳದೆ ಸುಮ್ಮನಾದನು. ನಿರಾಶೆಯ ಭಾರದಿಂದ ಅಲ್ಲಿಂದ ಹೊರಟನು. ಮರುದಿನ ಅವನು ನಗರದೊಳಗೆ ಅನೇಕ ಕಡೆಗಳಲ್ಲಿ



ತಿರುಗಿದನು. ಮಾಂತ್ರಿಕ ಸಿಂಹಾಸನವನ್ನು ನೋಡುವ ಉಪಾಯವನ್ನು ಕುರಿತು ಅನೇಕರೊಡನೆ ವಿಚಾರಿಸಿದನು. ಅವನು ಇರುವುದು ಶ್ರೀಪಾಲ ಪೌರಾಣಿಕನ ಮನೆಯಲ್ಲಿ ಎಂದು ತಿಳಿದವರೆಲ್ಲರೂ, "ಅದಕ್ಕಾಗಿ ನಿನಗೇನು ಕಷ್ಟವಿದೆ? ಪೌರಾಣಿಕ ಶ್ರೀಪಾಲರ ಮಾತೆಂದರೆ ರಾಜನಿಗೆ ವೇದವಾಕ್ಯ. ಆ ಸಿಂಹಾಸನವನ್ನು ನೋಡಲು ಅವರಿಗಿರುವ ವರ್ಚಸ್ಸೇ ಸಾಕಲ್ಲ? ಅವರ ವರ್ಚಸ್ಸು ಸಾಮಾನ್ಯವಲ್ಲವಷ್ಟೆ?" ಎಂದರು.

ಆ ದಿನ ರಾಜನ ಮುಂದೆ ಪುರಾಣ ಪಠನಮಾಡಿ ಮನೆಗೆ ಬಂದ ಶ್ರೀಪಾಲನೊಂದಿಗೆ ಶೀತಳನು "ನಾನು ಅನೇಕರೊಡನೆ ವಿಚಾರಿಸಿದೆ. ಎಲ್ಲರೂ ನಿನಗೆ ದೊಡ್ಡ ವರ್ಚಸ್ಸು ಇರುವುದಾಗಿ ಹೇಳುತ್ತಾರೆ. ಅಂತಹ ನೀನು ನನಗೆ ಇದೊಂದು ಸಣ್ಣ ಉಪಕಾರ ಮಾಡಲಾರೆಯಾ? ನಿನ್ನ ವರ್ಚಸ್ಸು ಎಂತಹುದೆಂದು ನಿನಗೇ ಗೊತ್ತಿಲ್ಲದ್ದು ಆಶ್ಚರ್ಯವಾಗಿದೆ!" ಎಂದನು.



"ಅದೆಲ್ಲಾ ಜನರ ಭ್ರಮೆಯೇ ಹೊರತು ನನಗೆ ಯಾವ ವರ್ಚಸ್ಸೂ ಇಲ್ಲ. ಈ ವಿಷಯದಲ್ಲಿ ನನ್ನನ್ನು ಸುಮ್ಮನೆ ಪೀಡಿಸಬೇಡಪ್ಪ !" ಎಂದನು ಶ್ರೀಪಾಲ. ತನ್ನ ಕೆಲಸವು ಶ್ರೀಪಾಲನಿಂದ ಆಗುವುದಿಲ್ಲವೆಂದು ಶೀತಳನಿಗೆ ಅರ್ಥವಾಯಿತು.

ಆದರೆ ಹಟಗಾರನಾದ ಅವನಿಗೆ ಅಂದುಕೊಂಡುದನ್ನು ಸಾಧಿಸದೆ ಹಿಂದಿರುಗಲು ಇಷ್ಟವಿರಲಿಲ್ಲ. ಕೋಟೆಯೊಳಗೆ ಮಾಂತ್ರಿಕನ ಸಿಂಹಾಸನವನ್ನು ಕಾವಲು ಕಾಯುವ ಸೈನಿಕರಲ್ಲಿ ಒಬ್ಬನೊಂದಿಗೆ ಅವನಿಗೆ ಪರಿಚಯವಾಗಿತ್ತು.

ಅವನೊಂದಿಗೆ ಶೀತಳನು ತನ್ನ ಆಕಾಂಕ್ಷೆಯನ್ನು ಹೇಳಿ ಆಲೋಚನೆ ಕೇಳಿದಾಗ, ಆ ಸೈನಿಕನು, "ನಾಳೆ ಇಲ್ಲಿಗೆ ಬಂದರೆ ಸಿಂಹಾಸನವನ್ನು ತೋರಿಸುತ್ತೇನೆ" ಎಂದು ಮಾತುಕೊಟ್ಟನು.

ಶೀತಳನು ಸಂತೋಷಪಟ್ಟು, ಆ ಸಂಗತಿಯನ್ನು ಶ್ರೀಪಾಲನೊಂದಿಗೆ ಹೆಮ್ಮೆಯಿಂದ ಹೇಳಿಕೊಂಡು, "ಒಟ್ಟಿನ ಮೇಲೆ ಬಂದ ಕೆಲಸ ಸಾಧಿಸದೆ ಬಿಡೆನೆಂದಾಯಿತು. ನಾಳೆ ಸಾಯಂಕಾಲ ನೀನು ನನ್ನನ್ನು ನಿನ್ನೊಂದಿಗೆ ಕೋಟೆಯೊಳಗೆ ಕರೆದುಕೊಂಡು ಹೋದರೆ ಸಾಕು" ಎಂದನು.

ನಡೆದ ಸಂಗತಿ ಕೇಳಿ ಶ್ರೀಪಾಲನಿಗೆ ಬುದ್ಧಿ ಕೆಟ್ಟಂತಾಯಿತು. ತನ್ನಿಂದಾಗದ ಕೆಲಸವನ್ನು ಹಳ್ಳಿಯಿಂದ ಬಂದ ಶೀತಳನು ಸಾಧಿಸುವನೆಂದರೆ, ಈ ವಿಷಯವನ್ನು ಅವನು ಊರಿಗೆ ಹೋಗಿ ಎಲ್ಲರೊಂದಿಗೆ ಹೇಳಿಕೊಳ್ಳುತ್ತಾನೆ. ಅದು ತನಗೆ ಒಳ್ಳೆಯದಲ್ಲ. ಅಲ್ಲಿರುವವರು ತಾನು ದೊಡ್ಡದೊಂದು ಪದವಿಯಲ್ಲಿ ಪ್ರಭಾವಶಾಲಿಯಾಗಿದ್ದೇನೆಂದೇ ತಿಳಿದಿದ್ದಾರೆ. ಈ ಸಂಗತಿ ಗೊತ್ತಾದರೆ ತಾನು ಬಹಳ ಅಲ್ಪ ಮಟ್ಟಕ್ಕೆ ಇಳಿಯುವೆನೆಂದು ಶ್ರೀಪಾಲನಿಗೆ ಕಳವಳವಾಯಿತು.

ಹೀಗೆ ಮನೋವೇದನೆಗೆ ಗುರಿಯಾದ ಶ್ರೀಪಾಲನು ಮರುದಿನ ರಾಜನ ಮುಂದೆ ಪುರಾಣ ಪಠಿಸುವುದಕ್ಕೆ ಮೊದಲು "ಮಹಾ ಪ್ರಭೂ, ತಾವು ಮಾಂತ್ರಿಕನ ಸಿಂಹಾಸನದ ವಿಷಯದಲ್ಲಿ ಮಾಡಿದ ಕಟ್ಟುದಿಟ್ಟಗಳು ಅಷ್ಟು ಸರಿಯಾಗಿಲ್ಲವೆಂದು ನನಗೆ ತೋರುತ್ತದೆ. ಕೆಲಮಂದಿ ಕಾವಲಿನ ಸೈನಿಕರು ತಮಗೆ ತೋರಿದವರಿಗೆ ಆ ಭವನದೊಳಗೆ ಹೋಗಲು ಬಿಟ್ಟು ಸಿಂಹಾಸನವನ್ನು ತೋರಿಸುವ ಅವಕಾಶವಿದೆ ಎಂದು ನನಗೆ ಅನಿಸುತ್ತಿದೆ. ನನಗೆ ತಪ್ಪಿದ ಸಂದೇಹ ಹೇಳಿದೆನು. ಪ್ರಭುಗಳು ಪರಾಂಬರಿಸಬೇಕು" ಎಂದನು.

ರಾಜನು ಕೂಡಲೇ ಒಬ್ಬ ಪರಿಚಾರಕನನ್ನು ಕರೆದು, "ಅಲ್ಲಿ ಮಾಂತ್ರಿಕನ ಸಿಂಹಾಸನವಿರಿಸಿದ ಭವನದೊಳಗೆ ಯಾವ ಕಾವಲಿನ ಸೈನಿಕರೂ ಪ್ರವೇಶಿಸಬಾರದು. ಅದಕ್ಕೆ ತಕ್ಕ ಬಂದೋಬಸ್ತು ಮಾಡಲು ನಾನು ಹೇಳಿದೆನೆಂದು ಮಂತ್ರಿಯ ಹತ್ತಿರ ಹೋಗಿ ಹೇಳು" ಎಂದು ಆಜ್ಞೆ ಮಾಡಿದನು.

ಶ್ರೀಪಾಲನು ತೃಪ್ತನಾಗಿ ತನ್ನ ಪುರಾಣ ಪಠನ ಮುಗಿಸಿ ತನ್ನ ಮನೆಗೆ ಹೋದನು. ಆ ದಿನ ಸಾಯಂಕಾಲದಲ್ಲಿ ಅವನು ಶೀತಳನನ್ನು ಕರೆದುಕೊಂಡು ಕೋಟೆಗೆ ಹೋದನು. ಶೀತಳನು ತನಗೆ ಪರಿಚಿತನಾದ ಸೈನಿಕನನ್ನು ನೋಡಿದ ಕೂಡಲೇ, ಆ ಸೈನಿಕನು ಚಿಂತೆಯಿಂದ, "ನನ್ನನ್ನು ಕ್ಷಮಿಸಯ್ಯಾ, ಈ ದಿನದಿಂದ ಕಾವಲಿನ ಸೈನಿಕರಾರೂ ಭವನದೊಳಗೆ ಪ್ರವೇಶಿಸ ಕೂಡದೆಂದು ಮಹಾರಾಜರು ಹೊಸ ನಿಯಮ ಹೊರಡಿಸಿದ್ದಾರೆ. ಹೀಗಾಗುವುದೆಂದು ನಾನೇನು ಕಂಡೆ ?" ಎಂದನು.



ಶೀತಳನು ಬಹುದೊಡ್ಡ ನಿರುತ್ಸಾಹದಿಂದ, "ಅರೆಯರೇ! ಇನ್ನೇನಾದರೂ ಉಪಾಯವಿಲ್ಲವೆ ?" ಎಂದು ಕೇಳಿದನು.

"ಈ ವಿಷಯದಲ್ಲಿ ಮಂತ್ರಿಯ ಹೊರತು ಬೇರೆ ಯಾರೂ ನಿನಗೆ ಸಹಾಯ ಮಾಡಲು ಸಾಧ್ಯವಿಲ್ಲ" ಎಂದನು ಕಾವಲಿನ ಸೈನಿಕ.

ಮರುದಿನ ಬೆಳಿಗ್ಗೆ ಶೀತಳನು ಮಂತ್ರಿಯ ಮನೆಗೆ ಹೋಗಿ ಆ ಮನೆಯಿಂದ ಹೊರಗೆ ಬರುವ ಎಲ್ಲರಿಗೂ ಸಾಷ್ಟಾಂಗ ನಮಸ್ಕಾರ ಮಾಡತೊಡಗಿದನು, ಅಂತಹ ವಿಲಕ್ಷಣ ಪ್ರವರ್ತನೆಯನ್ನು ನೋಡಿ ಮಂತ್ರಿ ಅವನನ್ನು ಒಳಕ್ಕೆ ಕರೆದು, ಹಾಗೇಕೆ ನಮಸ್ಕಾರ ಮಾಡುವುದೆಂದು ಕೇಳಿದನು.

"ಅಯ್ಯಾ, ಮಾಂತ್ರಿಕನ ಸಿಂಹಾಸನವನ್ನು ನೋಡಬೇಕೆಂದು ನಾನು ಬಹಳ ದೂರದಿಂದ ಈ ನಗರಕ್ಕೆ ಬಂದೆನು. ಅದಕ್ಕೆ ತಮ್ಮ ಹೊರತು ಬೇರೆ ಯಾರೂ ಸಹಾಯಕರು ಇಲ್ಲವೆಂದು ತಿಳಿಯಿತು. ತಮ್ಮನ್ನು ತೃಪ್ತಿಪಡಿಸಲು ನನ್ನ ಹತ್ತಿರ ಏನೂ ಇಲ್ಲ. ನಿಮ್ಮ ಮನೆಯಲ್ಲಿರುವವರೆಲ್ಲರ ಮೇಲೆಯೂ ನನಗಿರುವ ಭಕ್ತಿಯನ್ನು ತೋರಿಸಲು ಹೀಗೆ ಮಾಡಿದೆನು. ಬೇರೇನು ಮಾಡಲಿಕ್ಕೂ ನಾನು ಶಕ್ತನಲ್ಲ ಸ್ವಾಮಿ" ಎಂದನು ಶೀತಳ.

ಅವನ ಸತ್ಯವನ್ನು ಬಿಂಬಿಸುವ ಮಾತುಗಳು ಮಂತ್ರಿಗೆ ಹಿಡಿಸಿದುವು. ಮಂತ್ರಿ ಅವನು ಎಲ್ಲಿ ತಂಗಿರುವನೆಂಬುದನ್ನು ಕೇಳಿ, ಶ್ರೀಪಾಲ ಪೌರಾಣಿಕನ ಮನೆಯಲ್ಲಿರುವುದನ್ನು ತಿಳಿದ ಕೂಡಲೇ "ಇನ್ನೇನಪ್ಪಾ ? ಶ್ರೀಪಾಲರಿಗೆ ಕೋಟೆಯೊಳಗೆ ಎಲ್ಲಿಗೆ ಹೋಗಲಿಕ್ಕೂ ಅಡ್ಡಿ ಇಲ್ಲ. ನೀನು ಸುಮ್ಮನೇ ಇಷ್ಟೆಲ್ಲ ಕಷ್ಟಪಟ್ಟೆ" ಎಂದನು.

ಅದನ್ನು ಕೇಳಿ ಶೀತಳನು ಚಿಂತಿಸುತ್ತ, "ಎಲ್ಲರೂ ಹಾಗೆಯೇ ಹೇಳುತ್ತಾರೆ ಸ್ವಾಮಿ. ಆದರೆ ಶ್ರೀಪಾಲನು ಒಪ್ಪುವುದಿಲ್ಲ. ನೀವು ನನಗೆ ಪ್ರತ್ಯೇಕ ಅನುಮತಿ ಕೊಟ್ಟುದಾಗಿ ನಾಳೆ ನೀವೇ ಅವನ ಹತ್ತಿರ ಹೇಳಿಬಿಡಿರಿ, ನನ್ನ ಕೋರಿಕೆ ನೆರವೇರುತ್ತದೆ" ಎಂದನು.

ಹಾಗೆಯೇ ಮಾಡುವೆನೆಂದನು ಮಂತ್ರಿ. ಶೀತಳನು ಉತ್ಸಾಹದಿಂದ ಮನೆಗೆ ಹೋಗಿ, ನಡೆದ ಸಂಗತಿಯನ್ನು ಶ್ರೀಪಾಲನೊಂದಿಗೆ ಹೇಳಿ, "ನಾನು ಎಂತಹ ಹಟಗಾರನೆಂದು ಎಲ್ಲರಿಗೂ ಗೊತ್ತಿದೆ. ಹೇಗಾದರೂ



ಬಂದ ಕೆಲಸ ಪೂರ್ತಿ ಮಾಡದೆ ಬಿಡಲಾರೆನೆಂಬುದು ಈಗ ಸ್ಪಷ್ಟವಾಯಿತು" ಎಂದನು.

ಈಗ ಶೀತಳನು ಮಾಂತ್ರಿಕನ ಸಿಂಹಾಸನವನ್ನು ನೋಡಿಬಿಟ್ಟನಾದರೆ, ತನ್ನ ವರ್ಚಸ್ಸು ಪೂರ್ತಿ ಅಳಿದು ಹೋದಂತೆಯೇ ಸರಿ ಎಂದು ಶ್ರೀಪಾಲನು ಭಾವಿಸಿದನು. ಮರುದಿನ ಅವನು ಮಂತ್ರಿಯನ್ನು ಸಂಧಿಸಿದಾಗ ಮಂತ್ರಿ ಮಾತಾಡುವುದಕ್ಕೆ ಮೊದಲೇ, "ಗೊತ್ತಾಯಿತು. ನೀವು ನನ್ನ ಮನೆಯಲ್ಲಿರುವ ಶೀತಳನಿಗೆ ಮಾಂತ್ರಿಕನ ಸಿಂಹಾಸನವನ್ನು ನೋಡಲು ಪ್ರತ್ಯೇಕ ಅನುಮತಿ ಕೊಡುವಿರಂತೆ. ಬಹಳ ಸಂತೋಷ. ಆದರೆ ಇದರಲ್ಲಿ ನನ್ನದೇನೂ ಬಾಧ್ಯತೆ ಇಲ್ಲ. ಅಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ನಾನು ಬಾಧ್ಯನಾಗಲಾರೆ" ಎಂದನು.

ಆ ಮಾತು ಕೇಳಿ ಮಂತ್ರಿಗೆ ಭಯವಾಯಿತು. ಶೀತಳನು ಅದನ್ನು ನೋಡಲು ಸರಿಯಾದ ಗುಣದವನಲ್ಲವೇನೋ? ಹಾಗಿರುತ್ತಿದ್ದರೆ ಶ್ರೀಪಾಲನು ತಾನೇ ಅವನಿಗೆ ಆ ಸಿಂಹಾಸನ ನೋಡಲು ಬೇಕಾದ ಎಲ್ಲಾ ಏರ್ಪಾಡುಗಳನ್ನೂ ಮಾಡುತ್ತಿದ್ದನಷ್ಟೆ?

"ಹಾಗೆ ಇದರಲ್ಲಿ ನನ್ನ ಬಾಧ್ಯತೆ ಮಾತ್ರ ಏಕೆ ಬೇಕು? ನಿಮಗೆ ಇಷ್ಟವಿಲ್ಲದಿದ್ದರೆ ನನಗೂ ಇಷ್ಟವಿಲ್ಲ. ಹೋಗಲಿ ಬಿಡಿ" ಎಂದನು ಮಂತ್ರಿ.

ಶ್ರೀಪಾಲನು ಮನೆಗೆ ಹೋಗಿ ಶೀತಳನೊಂದಿಗೆ, "ಮಂತ್ರಿ ನಿನ್ನೊಂದಿಗೆ ಏನು ಹೇಳಿದರೋ ನನಗೆ ತಿಳಿಯದು. ಮಾಂತ್ರಿಕನ ಸಿಂಹಾಸನವನ್ನು ನೋಡಲು ಅನುಮತಿ ಸಿಕ್ಕಲಿಲ್ಲ" ಎಂದನು.

ಶೀತಳನು ಬೆಪ್ಪುಬಡೆದವಂತೆ ಸ್ವಲ್ಪ ಹೊತ್ತು ನಿಂತು ಆಮೇಲೆ ಸೀದಾ ಮಂತ್ರಿಯ ಮನೆಗೆ ಹೋದನು. ಆಗ ಮಂತ್ರಿ ಅವನೊಂದಿಗೆ, "ನೀನು ಶ್ರೀಪಾಲನ ಬಂಧುವಾದುದರಿಂದ, ಅವನ ಇಷ್ಟವಿಲ್ಲದೆ ಮಾಂತ್ರಿಕನ ಸಿಂಹಾಸನ ನೋಡಲು ಸಾಧ್ಯವಿಲ್ಲ. ಅದೇಕೋ ನಾನರಿಯೆ, ನೀನು ಆ ಸಿಂಹಾಸನವನ್ನು ನೋಡುವುದು ಅವರಿಗೆ ಇಷ್ಟವಿಲ್ಲ" ಎಂದು ನಡೆದ ಸಂಗತಿಯನ್ನು ಹೇಳಿದನು.

ಶೀತಳನು ಮನೆಗೆ ಹಿಂದಿರುಗಿ ಶ್ರೀಪಾಲನೊಂದಿಗೆ "ಇನ್ನು ನಾನು ನನ್ನ ಊರಿಗೆ ಹೋಗಿ ಬಿಡುತ್ತೇನೆ" ಎಂದು ಅಷ್ಟೇ ಹೇಳಿದನು.

"ಹಾಗೆ ನಿರಾಶನಾಗ ಬೇಡಪ್ಪಾ, ಕೇವಲ ಹಟ ಹೊಂದಿದ್ದರೆ ಎಲ್ಲ ಕೆಲಸವೂ ಆಗಿಬಿಡಲಾರದು. ಆ ಮಾಂತ್ರಿಕನ ಸಿಂಹಾಸನವನ್ನು ನೋಡಲು ನಿನಗೆ ಸಾಧ್ಯವಾಗದೆಂದು ನಾನು ಮೊದಲೇ ಹೇಳಿದ್ದೇನೆ, ಹೌದಾ?" ಎಂದನು ಶ್ರೀಪಾಲ.

"ನೀನು ಸಹಾಯ ಮಾಡುತ್ತಿದ್ದರೆ ಆಗುತ್ತಿತ್ತು" ಎಂದನು ಶೀತಳ.

"ನನಗೆ ಅಷ್ಟೊಂದು ವರ್ಚಸ್ಸು ಇಲ್ಲ ಎಂತಲೂ ಮೊದಲೇ ಹೇಳಿದ್ದೇನೆ" ಎಂದನು ಶ್ರೀಪಾಲ.

"ನಿನಗೆ ವರ್ಚಸ್ಸು ಇಲ್ಲದಿರುತ್ತಿದ್ದರೆ ಯಾವ ಕಷ್ಟವೂ ಬರುತ್ತಿದ್ದಿಲ್ಲ. ನಿನ್ನ ದೊಡ್ಡ ವರ್ಚಸ್ಸೇ

ನನಗೆ ಆತಂಕವಾಯಿತೆಂದು ಈಗ ನಿಚ್ಚಳವಾಗಿದೆ" ಎಂದನು ಶೀತಳ ಉಕ್ಕಿದ ಕೋಪದಿಂದ.

ಆ ಮಾತನ್ನು ಕೇಳಿದ ಕೂಡಲೇ ಶ್ರೀಪಾಲನು ಮೆಟ್ಟಿಬಿದ್ದನು. ಆಮೇಲೆ ಶೀತಳನನ್ನು ಒಳ್ಳೆಯ ಮಾತಿನಲ್ಲಿ ಸಮಾಧಾನಪಡಿಸಿ, ಅವನಿಗೆ ಮಾಂತ್ರಿಕನ ಸಿಂಹಾಸನವನ್ನು ತೋರಿಸುವ ಏರ್ಪಾಡು ಕೂಡಾ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಎಲೈ ರಾಜನೇ, ಶ್ರೀಪಾಲನ ಪ್ರವರ್ತನೆಯನ್ನು ಕುರಿತು ನಿನ್ನ ಅಭಿಪ್ರಾಯವೇನು? ಆ ಕ್ಷಣದವರೆಗೆ ಶೀತಳನಿಗೆ ಮಾಂತ್ರಿಕನ ಸಿಂಹಾಸನವನ್ನು ತೋರಿಸಲು ಸಹಾಯ ಮಾಡದಿದ್ದವನು, ಅವನ ಕೋಪದ ಮಾತುಗಳನ್ನು ಕೇಳಿ, ಬದಲಾವಣೆಯಾದನೇಕೆ? ಈ ಪ್ರಶ್ನೆಗೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಚೂರು ಚೂರಾಗುತ್ತದೆ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಶ್ರೀಪಾಲನಂತಹ ಮನಸ್ತತ್ವವುಳ್ಳವರು ಬಹಳ ಅಪೂರ್ವ. ಅಂತಹವರು ತಮ್ಮ ಬದುಕುವ ದಾರಿ ಹೇಗಾದರೂ ತಾವೇ ನೋಡಿಕೊಳ್ಳಬೇಕಲ್ಲದೆ, ಇತರರ ವಿಷಯದಲ್ಲಿ ತಾವು ತಲೆ ಹಾಕಬಾರದೆಂದು ಕೊಳ್ಳುತ್ತಾರೆ. ಅಂದುಕೊಳ್ಳುವುದು ಮಾತ್ರವಲ್ಲದೆ ಹಾಗೆಯೇ ಪ್ರವರ್ತಿಸುವೆವೆಂಬ ನಂಬುಗೆಯೂ ಅವರಿಗಿರುತ್ತದೆ. ಶೀತಳನು ಮಾಂತ್ರಿಕನ ಸಿಂಹಾಸನವನ್ನು ನೋಡಲು ಶ್ರೀಪಾಲನ ಸಹಾಯವನ್ನು ಕೇಳಿದಾಗ ಅದು ಬೇರೆಯವರ ವ್ಯವಹಾರದಲ್ಲಿ ತಲೆ ಹಾಕುವುದೇ ಆಗುತ್ತದೆಂದು ಅದಕ್ಕೆ ನಿರಾಕರಣೆ ತೋರಿಸಿದನು. ಅಂದರೆ ತನಗಿರುವ ವರ್ಚಸ್ಸಿನಲ್ಲಿ ಅವನಿಗೆ ನಂಬುಗೆ ಇರಲಿಲ್ಲವೆಂದೇ ಆಯಿತು. ಆದರೆ ಶೀತಳನು ಕೋಪಾವೇಶದಲ್ಲಿ ಹೇಳಿದ ಮಾತುಗಳನ್ನು ಕೇಳಿದ ಕೂಡಲೇ ಅವನಿಗೆ ತನ್ನ ವರ್ಚಸ್ಸನ್ನು ಇತರರಿಗೆ ಸಹಾಯ ಮಾಡಲು ಉಪಯೋಗಿಸುವುದಕ್ಕೆ ಬದಲಾಗಿ, ಕಷ್ಟವನ್ನುಂಟು ಮಾಡಲು ಉಪಯೋಗಿಸುವಂತೆ ಅರ್ಥವಾಗಿಬಿಟ್ಟಿತು. ರಾಜನ ಹತ್ತಿರವೂ, ಮಂತ್ರಿಯ ಹತ್ತಿರವೂ ತನಗಿರುವ ವರ್ಚಸ್ಸನ್ನು ಉಪಯೋಗಿಸುವವನು ಶೀತಳನ ಕೋರಿಕೆ ನೆರವೇರದಂತೆ ತಡೆದನು. ಶೀತಳನ ಹಟವು ಶ್ರೀಪಾಲನಿಗೆ ತನ್ನ ನಿಜ ರೂಪವನ್ನು ಕಣ್ಣಿಗೆ ಕಟ್ಟಿದಂತೆ ತೋರಿಸಿಬಿಟ್ಟಿತು. ಇದೆಲ್ಲಾ ಅರ್ಥವಾಗಿ ಅವನು ಮನಸ್ಸು ಬದಲಾಯಿಸಿಕೊಂಡು ಶೀತಳನಿಗೆ ಸಹಾಯ ಮಾಡಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತು.



# ಚಿತ್ತಶುದ್ಧಿ

ವಿಶಾಖದತ್ತನೆಂಬೊಬ್ಬ ರಾಜನು ಕೆಲವು ದಿನಗಳವರೆಗೆ ಅನಾರೋಗ್ಯದಿಂದ, ಸಂಕಟಪಟ್ಟು ಗುಣಮುಖನಾಗ ತೊಡಗಿದನು.

ಹಾಗಿರುವಾಗ ಒಂದು ದಿನ ನಗರದ ಪ್ರಮುಖರು ಕೆಲವರು ರಾಜನನ್ನು ನೋಡಲು ಬಂದು, ಅವರು ರಾಜನಿಗೆ ಗುಣವಾಗಲೆಂದು ದೇವಾಲಯಗಳಲ್ಲಿ ಅರ್ಚನೆ ನಡೆಸಿದ ಪ್ರಸಾದವನ್ನು ರಾಜನ ಮುಂದಿಟ್ಟು ಕೈ ಮುಗಿದು ನಿಂತರು.

ಆ ಸಮಯದಲ್ಲಿ ಒಬ್ಬ ಗೋವಳನು, ಭಟರು ತಡೆಯುತ್ತಿದ್ದರೂ ಕೇಳದೆ ಅಲ್ಲಿಗೆ ಓಡಿಬಂದು, ಹೆಗಲಿನಲ್ಲಿ ನೇತಾಡಿಸಿಕೊಂಡಿದ್ದ ಚೀಲವನ್ನು ರಾಜನ ಮುಂದಿಡುತ್ತ, "ಪ್ರಭೂ, ನನ್ನನ್ನು ಗೋಪಣ್ಣ ಅನ್ನುತ್ತಾರೆ. ಇಲ್ಲಿಗೆ ಹರಿದಾರಿ ದೂರದಲ್ಲಿರುವ ಮೈದಾನದಲ್ಲಿ ತಮ್ಮ ಪಶುಗಳನ್ನು ನೋಡಿಕೊಳ್ಳುತ್ತ ಇರುತ್ತೇನೆ. ತಮಗೆ ಮೈ ಸರಿ ಇಲ್ಲವೆಂದು ತಿಳಿದು ನಮ್ಮೂರಿನ ಮಾರಮ್ಮನ ಗುಡಿಯಲ್ಲಿ ಹುಗ್ಗೀ ನೈವೇದ್ಯವಿಡಿಸಿ ತಂದಿದ್ದೇನೆ. ಆ ಮಹಾತಾಯಿಯ ಪ್ರಸಾದ ತಿಂದರೆ ಎಂತಹ ರೋಗವಾದರೂ ಮಾಯವಾಗುತ್ತೆ. ಸ್ವೀಕರಿಸಬೇಕು ಸ್ವಾಮಿ" ಎಂದನು.

ಅವನ ಮಾತನ್ನು ಕೇಳುತ್ತ, ಆ ಹುಗ್ಗಿಯಿಂದ ಹೊರಡುವ ವಾಸನೆಗೆ ಅಲ್ಲಿರುವ ಪ್ರಮುಖರೆಲ್ಲಾ ಮೂಗು ಮುಚ್ಚಿಕೊಂಡರೂ, ರಾಜನು ಮಾತ್ರ ಮುಗುಳು ನಗುತ್ತ ತನ್ನ ಕಂಠಹಾರವನ್ನು ತೆಗೆದು ಗೋಪಣ್ಣನ ಕೊರಳಿಗೆ ಹಾಕಿದನು.

ಪಕ್ಕದಲ್ಲಿದ್ದು ಇದನ್ನೆಲ್ಲ ನೋಡುತ್ತಿದ್ದ ರಾಜನ ಬಾಲ್ಯ ಮಿತ್ರನು, "ಮಹಾರಾಜಾ, ದುರ್ವಾಸನೆ ಹೊಡೆಯುತ್ತಿರುವ ಆ ಪ್ರಸಾದ ತಂದ ಆ ಗೋವಳನಿಗೆ ಅಷ್ಟು ದೊಡ್ಡ ಸತ್ಕಾರವೇತಕ್ಕೆ ?" ಎಂದು ಆಶ್ಚರ್ಯದಿಂದ ಕೇಳಿದನು.

"ಆ ದುರ್ವಾಸನೆಯದನ್ನು ನಾನು ತಿಂದರೆ ನನ್ನ ಆರೋಗ್ಯವು ಸರಿಯಾಗುವುದೆಂಬ ಆಶೆಯಿಂದ, ಇಷ್ಟು ದೂರ ನಡೆದು ಬಂದವನ ಚಿತ್ತಶುದ್ಧಿ, ಪ್ರತಿಫಲಾಪೇಕ್ಷೆಯಿಲ್ಲದ ಭಾವನೆ ಅನುಪಮಾನವಾದುದು" ಎಂದನು ವಿಶಾಖದತ್ತ ರಾಜ.





# ಮಾಳವಿಕಾ

ಒಂದಾನೊಂದು ಕಾಲದಲ್ಲಿ ಮಂದಾಕಿನೀ ನದಿಯ ತೀರದಲ್ಲಿ ಮರಕತಪುರವೆಂಬೊಂದು ಗ್ರಾಮ ವಿದ್ದಿತು. ಆ ಗ್ರಾಮದಲ್ಲಿ ಮಾಳವಿಕಾ ಎಂಬ ಯುವತಿಯೊಬ್ಬಳು ವಾಸವಾಗಿದ್ದಳು.

ಅವಳೊಬ್ಬಳು ಉತ್ತಮ ನರ್ತಕಿ. ಶಾಸ್ತ್ರೀಯ ವಾದ ಅನೇಕ ಬಗೆಯ ನೃತ್ಯಗಳನ್ನು ಅವಳು ಅಭ್ಯಾಸ ಮಾಡಿದ್ದಳು. ಪ್ರತಿ ವರ್ಷ ಆ ಗ್ರಾಮದೊಳಗಿನ ಮಂದಾಕಿನೀ ದೇವಿಯ ಆಲಯದಲ್ಲಿ ನಡೆಯುವ ಉತ್ಸವಗಳಲ್ಲಿ ಮಾಳವಿಕಾಳ ನರ್ತನವು ನಡೆಯು ತ್ತಿತ್ತು. ಅವಳ ನಾಟ್ಯ ಪ್ರದರ್ಶನಗಳಿಂದ ಉತ್ಸವ ಗಳಿಗೆ ಒಳ್ಳೆಯ ಕಳೆ ಬರುತ್ತಿತ್ತು.

ಒಂದು ವರ್ಷದ ಮಂದಾಕಿನೀ ದೇವಾಲಯದ ಉತ್ಸವ ಕಾಲದಲ್ಲಿ ಮಾಳವಿಕಾಳಿಗೆ ಅನಾರೋಗ್ಯ ವಾದುದರಿಂದ ಅವಳ ನೃತ್ಯವು ನಡೆಯಲಿಲ್ಲ. ಉತ್ಸವದ ದಿನಗಳು ಅವಳ ನಾಟ್ಯಗಳೇನಿಲ್ಲದೆ ಬಹಳ ಸಪ್ಪಗಾಗಿ ನಡೆಯಿತು. ಉತ್ಸವಕ್ಕೆ ಬಂದ ಎಲ್ಲರಿಗೂ ಮಾಳವಿಕಾಳ ನೃತ್ಯವಿಲ್ಲದ್ದೊಂದು ದೊಡ್ಡ ಅಸಂತೃಪ್ತಿಯಾಗಿತ್ತು. ಎಲ್ಲರೂ ಅವಳ ಅನಾರೋಗ್ಯ ವನ್ನು ಕುರಿತೇ ತಮ್ಮ ಕೊರತೆಯನ್ನು ಹೇಳಿಕೊಂಡರು.

ಉತ್ಸವ ದಿನಗಳು ಮುಗಿದ ಮೇಲೆ, ಗ್ರಾಮದ ಜನರನೇಕರು ಮಾಳವಿಕಾಳನ್ನು ನೋಡಲು ಹೋದರು. ಉತ್ಸವದಲ್ಲಿ ಅವಳ ನಾಟ್ಯವಿಲ್ಲದುದರಿಂದ ತಮಗೆಲ್ಲ ಎಷ್ಟು ಅತೃಪ್ತಿಯಾಯಿತೆಂದು ಅವಳೊಡನೆ ಹೇಳಿದರು. ಇನ್ನು ಮುಂದೆ ಆಲಯದಲ್ಲಿ ಬರುವ ಉತ್ಸವಗಳ ಸಮಯಕ್ಕೆ ಅವಳಿಗೆ ಯಾವ ಅನಾರೋಗ್ಯವೂ ಬರಬಾರದೆಂದು ಕೋರಿಕೊಂಡರು.

ತನ್ನ ನಾಟ್ಯವಿಲ್ಲದೆ ಹೋದುದರಿಂದ ಜನರೆಲ್ಲ ಬಹಳ ನೊಂದುಕೊಳ್ಳುವುದನ್ನು ಕೇಳುತ್ತಿದ್ದಂತೆ ಮಾಳವಿಕಾಳ ಮನಸ್ಸು ಗರ್ವದಿಂದ ತುಂಬ ತೊಡಗಿತು. ನೋಡುತ್ತಿದ್ದಂತೆ ಕಾಲ ಉರುಳುತ್ತ, ಮರು ವರ್ಷದ ಉತ್ಸವವು ಬಂದು ಬಿಟ್ಟಿತು. ಈ ವರ್ಷ ಮಾಳವಿಕಾ ಒಳ್ಳೆಯ ಆರೋಗ್ಯದಿಂದ ನಾಟ್ಯವಾಡಲು ಸಮರ್ಥಳಾಗಿದ್ದಳು. ಎಂದಿನಂತೆ ಕಾರ್ಯಕರ್ತರು ಉತ್ಸವ ಕಾರ್ಯಕ್ರಮಗಳಲ್ಲಿ ಮಾಳವಿಕಾಳ ನಾಟ್ಯ ಪ್ರದರ್ಶನಗಳಿಗೂ ಏರ್ಪಾಡು ಮಾಡಿಕೊಂಡಿದ್ದರು.

ಆಗ ಮಾಳವಿಕಾ ಒಂದುಸಾರಿ ತನ್ನ ಬಳಿಗೆ ಬರುವಂತೆ ದೇವಾಲಯದ ಕಾರ್ಯಕರ್ತರಿಗೆ ಸುದ್ದಿ

ಎಸ್. ಎಲ್. ಗಾಯತ್ರಿ



ಕಳುಹಿಸಿದಳು. ಹೀಗೆ ಹಿಂದೆ ಎಂದೂ ಅವಳು ತನ್ನ ಮನೆಗೆ ಪ್ರಮುಖರನ್ನು ಬರಮಾಡಿರಲಿಲ್ಲ. ಆದುದರಿಂದ ಕಾರ್ಯಕರ್ತರು ಸ್ವಲ್ಪ ಆಶ್ಚರ್ಯ ಪಡುತ್ತ ಅವಳ ಮನೆಗೆ ಬಂದರು.

ಮಾಳವಿಕಾ ಹಾಗೆ ಬಂದವರನ್ನು ಕುಳಿತುಕೊಳ್ಳಲಿಕ್ಕೂ ಹೇಳದೆ, "ನಿಮಗೊಂದು ಸಣ್ಣ ವಿಷಯ ಹೇಳಬೇಕೆಂತಲೇ ಕರೆಸಿದೆನು. ನೀವು ನನಗೆ ಪ್ರತಿ ವರ್ಷವೂ ಕೊಡುವ ರೀತಿಯಲ್ಲಿ ಈ ವರ್ಷ ಕೂಡಾ ಕೇವಲ ನೂರಹದಿನಾರು ರೂಪಾಯಿ ಮಾತ್ರವೇ ಕೊಟ್ಟರೆ ನನಗೆ ಸ್ವಲ್ಪ ಬೇಸರವಾಗುತ್ತದೆ. ಕಡೇಪಕ್ಷ ಇನ್ನೂರಾದರೂ ಕೊಡಬೇಕು. ಮೊದಲೇ ಹೇಳಿ ಬಿಡುವುದು ಒಳ್ಳೆಯದೆಂತಲೇ ಕರೆಸಿದೆ" ಎಂದಳು.

ಆ ಮಾತನ್ನು ಕೇಳಿ ಕಾರ್ಯಕರ್ತರು ಬೆರಗಾದರು. ಅವಳು ಕೇಳಿದ ಕೋರಿಕೆಗಿಂತಲೂ ಹೇಳಿದ ರೀತಿಯೂ, ನಿರ್ಲಕ್ಷ್ಯತೆಯ ವೈಖರಿಯೂ ಅವರನ್ನು ಹೆಚ್ಚು ಆಶ್ಚರ್ಯಪಡಿಸಿತು. ಅವರು ಸ್ವಲ್ಪಹೊತ್ತು ತಮ್ಮೊಳಗೆ ಸೈಗೆ ಮಾಡಿಕೊಂಡು, ಅದರ ಸಂಗತಿಯನ್ನು ಈಗಲೇ ಹೇಳಲಾಗುವುದಿಲ್ಲವೆಂದೂ, ಆಲೋಚಿಸಿ ಬೇಗದಲ್ಲೇ ಹೇಳುತ್ತೇವೆಂದೂ ಹೇಳಿ ಹೊರಟುಹೋದರು.

ಅವರು ಹೋಗುವುದನ್ನು ನೋಡುತ್ತಾ ಮಾಳವಿಕಾ ಗರ್ವದಿಂದ ನಗಾಡಿಕೊಂಡಳು. ಉತ್ಸವಗಳು ಎಷ್ಟು ಗೌಜಿಯಿಂದ ಘನವಾಗಿ ನಡೆದರೂ ತನ್ನ ನಾಟ್ಯವಿಲ್ಲದೆ ಜನರಿಗೆ ತೃಪ್ತಿಯಾಗದು. ಉತ್ಸವವೂ ಬಹು ಸಪ್ಪೆಯಾಗುತ್ತದೆ. ಆದುದರಿಂದ ತಾನು ಕೇಳಿದ ಇನ್ನೂರನ್ನು ಖಂಡಿತ ಕೊಡುತ್ತಾರೆಂದು ಅವಳು ಅಂದುಕೊಂಡಳು.

ಆದರೆ ಮಾಳವಿಕಾಳ ಮನೆಯಿಂದ ಹಿಂದಿರುಗಿ ಹೋದ ದೇವಾಲಯದ ಕಾರ್ಯಕರ್ತರು ಜಮಾ ಖರ್ಚುಗಳನ್ನೆಲ್ಲ ಎಣಿಸಿ ನೋಡಿ, ಪ್ರಜೆಗಳಿಂದ ಇನ್ನಷ್ಟು ಚಂದಾ ವಸೂಲು ಮಾಡದಿದ್ದರೆ ತಾವು ಮಾಳವಿಕಾಳಿಗೆ ಇನ್ನೂರು ರೂಪಾಯಿ ಕೊಡಲು ಸಾಧ್ಯವಾಗದೆಂದು ಸ್ಪಷ್ಟಪಡಿಸಿಕೊಂಡರು. ಒಂದು ಪರಿಮಿತಿಯನ್ನು ಮೀರಿ ಚಂದಾ ವಸೂಲು ಮಾಡಬೇಕಾದರೆ ಅವರಾರಿಗೂ ಸ್ವತಂತ್ರವಿದ್ದಿಲ್ಲ. ಅದಕ್ಕೆ ರಾಜಧಾನಿಗೆ ಹೋಗಿ ಮಹಾರಾಜನ ಅನುಮತಿ ಪಡೆಯಬೇಕಿತ್ತು.

ಆದುದರಿಂದ ಕಾರ್ಯಕರ್ತರು ರಾಜಧಾನೀ ನಗರಕ್ಕೆ ಹೋಗಿ, ರಾಜದರ್ಶನ ಮಾಡಿ, ಮಂದಾಕಿನೀ ದೇವಾಲಯದ ಉತ್ಸವದಲ್ಲಿ ಮಾಳವಿಕಾಳ ನೃತ್ಯ ಕ್ರಮದಲ್ಲಿ ತಮಗೆ ಇದಿರಾದ ಸಮಸ್ಯೆಯನ್ನು ಬಿನ್ನವಿಸಿಕೊಂಡರು.

ಆ ದೇಶದ ರಾಜನಾದ ಕೃಷ್ಣದೇವ ಭೂಪತಿ ದೊಡ್ಡ ಪಂಡಿತನಾಗಿದ್ದನು. ತುಂಬ ಧಾರ್ಮಿಕನೂ ಹೌದು. ಅವನು ಕಾರ್ಯಕರ್ತರು ಹೇಳಿದುದನ್ನೆಲ್ಲಾ ಕೇಳಿ, "ಅದಕ್ಕಾಗಿ ನೀವು ಪ್ರಜೆಗಳಿಂದ ಪ್ರತ್ಯೇಕವಾಗಿ ಚಂದಾ ವಸೂಲು ಮಾಡಬೇಕಾಗಿಲ್ಲ. ಅವಳಿಗೆ

ಕೊಡಬೇಕಾದ ಎಂಬತ್ತನಾಲ್ಕು ರೂಪಾಯಿಗಳನ್ನು ನಾನು ಕೊಡುತ್ತೇನೆ. ಮತ್ತೊಂದು ಸಂಗತಿ. ನಮ್ಮ ಆಸ್ಥಾನಕ್ಕೆ ಚಂದ್ರಶೇಖರರೆಂಬ ಸಾಧುಗಳೊಬ್ಬರು ಬಂದಿದ್ದಾರೆ. ಅವರನ್ನು ನಿಮ್ಮ ಊರಿಗೆ ಹೋಗುವಂತೆ ಕೇಳಿಕೊಳ್ಳುತ್ತೇನೆ. ಮಾಳವಿಕಾಳ ನಾಟ್ಯ ಪ್ರದರ್ಶನಕ್ಕೆ ಮೊದಲು ಅವರ ಧರ್ಮೋಪನ್ಯಾಸ ನಡೆಯಬೇಕು. ಕಾರ್ಯಕ್ರಮದಲ್ಲಿ ಅದಕ್ಕೆ ಕೂಡಾ ಸ್ವಲ್ಪ ಸಮಯವನ್ನು ಸೇರಿಸಿ ಇಟ್ಟುಕೊಳ್ಳಿರಿ" ಎಂದು ಹೇಳಿದನು.

ಕೃಷ್ಣದೇವಭೂಪತಿ ಹೇಳಿದ ಹಾಗೆಯೇ ಮಾಳವಿಕಾಳ ನಾಟ್ಯ ಪ್ರದರ್ಶನಕ್ಕೆ ಮುಂಚಿನ ದಿನ ಚಂದ್ರಶೇಖರ ಸಾಧುವಿನ ಧರ್ಮೋಪನ್ಯಾಸಕ್ಕೆ ಏರ್ಪಾಡು ಮಾಡಲಾಯಿತು.

ಅದಕ್ಕಾಗಿ ಮಾಳವಿಕಾಳಿಗೆ ಪ್ರತ್ಯೇಕ ಆಹ್ವಾನವನ್ನೂ ಕಳುಹಿಸಲಾಯಿತು. ಅವಳು ಕುಳಿತುಕೊಳ್ಳಲು ಮುಂದಿನ ವರಿಸೆಯಲ್ಲಿ ಸ್ಥಳವನ್ನೂ ಪ್ರತ್ಯೇಕಿಸಿಟ್ಟರು.

ಚಂದ್ರಶೇಖರ ಸಾಧುವಿನ ಉಪನ್ಯಾಸವು ಪ್ರಾರಂಭವಾಯಿತು. ಅವನು ಅನೇಕ ಲೌಕಿಕ, ಧಾರ್ಮಿಕ ವಿಷಯಗಳನ್ನು ಕುರಿತು ಆಸಕ್ತಿ ಹುಟ್ಟುವ ರೀತಿಯಲ್ಲಿ ಉಪನ್ಯಾಸ ಕೊಡುತ್ತಿದ್ದನು. ಒಳ್ಳೊಳ್ಳೆಯ ಉದಾಹರಣೆಗಳನ್ನು ಹೇಳುತ್ತಿದ್ದನು. "ಪ್ರೇಮಕ್ಕೆ ಮತ್ತೊಂದು ರೂಪವೇ ಕರುಣೆ. ಮತ್ತೊಂದು ಜೀವಿಗೆ ಜನ್ಮವೀಯುವ ಸ್ತ್ರೀ ಪ್ರೇಮಸ್ವರೂಪಿಣಿಯಾಗಿರುತ್ತಾಳೆ. ಅವಳು ತನ್ನ ಕರುಣಾರಸಪೂರ್ಣವಾದ ಪ್ರೇಮವನ್ನು ಬಾಧ್ಯತೆಯುಳ್ಳ ಮನೆಯ ಒಡತಿಯಾಗಿ, ಉತ್ಕೃಷ್ಟ ಗೃಹಿಣಿಯಾಗಿ, ಮಾತೃಮೂರ್ತಿಯಾಗಿ ಅನೇಕ ವಿಧಗಳಿಂದ ಎಲ್ಲರಿಗೂ ಒಳಿತನ್ನೇ ಕೊಡುತ್ತಾಳೆ. ಆದರೆ ಇದರಲ್ಲಿ ಒಂದು ಚಿಕ್ಕ ವ್ಯತ್ಯಾಸವಿದೆ.

"ಅಮ್ಮಾ, ನಿನ್ನೆ ನೀನು ಕಾಣದೆ ಹೋದಾಗ ನನಗೆ ಬಹಳ ಭಯವಾಯಿತು ಎಂದು ಮಗು ಹೇಳಿದರೆ ತಾಯಿಯ ಮನಸ್ಸು ಕನಿಕರದಿಂದ ಕರಗಿ ಹೋಗುತ್ತದೆ. ಇನ್ನೆಂದಿಗೂ ಮಗುವನ್ನು ಬಿಟ್ಟು



ಹೋಗಕೊಡದೆಂಬ ನಿರ್ಣಯಕ್ಕೆ ಅವಳು ಬರುತ್ತಾಳೆ. ಹಾಗೆಯೇ ಗಂಡನು ಹೆಂಡತಿಯೊಂದಿಗೆ, ನಿನ್ನೆ ನೀನು ಇಲ್ಲದೆ ಹೋದುದರಿಂದ ನಾನು ಎಷ್ಟು ಕಷ್ಟಪಟ್ಟೆನೋ ಎಂದರೆ, ಗಂಡನು ತನ್ನ ಮೇಲಿಟ್ಟಿರುವ ಅಭಿಮಾನವನ್ನು ನೋಡಿ ಹೆಂಡತಿ ಗಂಡನಿಗೆ ಕಷ್ಟಬರುವ ಹಾಗೆ ಇನ್ನೆಂದಿಗೂ ತಾನು ಹೋಗಲಾರೆನೆಂದು ನಿಶ್ಚಯಿಸಿಕೊಳ್ಳುತ್ತಾಳೆ. ಅದೇ ಮಾತನ್ನು ಕಿಂಚಿತ್ತೂ ಪ್ರೇಮ, ಕರುಣೆ, ಕನಿಕರಗಳೇನಿಲ್ಲದೆ, ಕೇವಲ ಧನವೇ ಪ್ರಧಾನವೆಂದು ಭಾವಿಸುವ ಸ್ತ್ರೀಯೊಂದಿಗೆ ಹೇಳಿದರೆ ಅವಳು ಚಲಿಸಲಾರಳು. ಧನಕ್ಕೆ ಇರುವ ಶಕ್ತಿ ಅಂತಹುದು. ಅಂತಹವಳು ಇತರರಿಗೆ ತನ್ನ ಮೇಲಿರುವ ವಿಶ್ವಾಸವನ್ನೂ, ಆಕರ್ಷಣೆಯನ್ನೂ, ಆಧಾರಮಾಡಿಕೊಂಡು ಇನ್ನಿಷ್ಟು ಅಧಿಕಾರ ಚಲಾಯಿಸಲಿಕ್ಕೆ ಅಥವಾ ಸ್ವಾರ್ಥಿಯಾಗಿ ಮತ್ತಿಷ್ಟು ಹೆಚ್ಚು ಹಣ ಕಿತ್ತುಕೊಳ್ಳಲಿಕ್ಕೇ ಪ್ರಯತ್ನಿಸುತ್ತಾಳೆ. ಪ್ರೇಮದ ತತ್ವವು ತಿಳಿಯದೆ ಹೋದುದೇ ಇದಕ್ಕೆ ಕಾರಣ. ಮೃದುವಾದ ಮನಸ್ಸು ಇದಿರಾಳಿಗಳ ಅಭಿಮಾನವನ್ನು ತಿಳಿಯುವಂತಹುದು. ಆ ತಿಳುವಳಿಕೆ ಇಲ್ಲದಿದ್ದರೆ ಇನ್ನಿಷ್ಟು ಹಣ ಬರಬೇಕೆಂಬ ದುರಾಶೆ ನುಸುಳುತ್ತದೆ..."

ಹೀಗೆ ಚಂದ್ರಶೇಖರ ಸಾಧುವಿನ ಉಪನ್ಯಾಸವು ಸಾಗುತ್ತಿರಲು, ಮಾಳವಿಕಾಳ ಮನಸ್ಸು ಅತ್ಯಂತ ಅಸಂತೃಪ್ತಿ, ಆಂದೋಳನೆಗಳಿಂದ ಹೊಯ್ದಾಡತೊಡಗಿತು. ಏನೋ ಪಶ್ಚಾತ್ತಾಪಪಡತೊಡಗಿದಳು.

ಚಂದ್ರಶೇಖರ ಸಾಧುವಿನ ಉಪನ್ಯಾಸವು ಮುಗಿದ ಕೂಡಲೇ, ಅವಳು ಎದ್ದು ಅವನ ಪಾದಗಳ ಮುಂದೆ ಅಡ್ಡಬಿದ್ದು, "ಸ್ವಾಮಿ, ಈ ಅಜ್ಞಾನದವಳನ್ನು ಕ್ಷಮಿಸಿ, ಜ್ಞಾನಭಿಕ್ಷೆ ದಯಮಾಡಿರಿ. ನನ್ನದು ಮಹಾಪರಾಧವಾಗಿದೆ" ಎಂದು ಕಣ್ಣೀರು ಸುರಿಸಿದಳು.

ಆಗಲೇ ಕೃಷ್ಣದೇವಭೂಪತಿ ತನ್ನ ಸಾಧುವೇಷವನ್ನು ಕಳಚಿ, "ಮಾಳವಿಕಾ, ನಿನ್ನ ನಾಟ್ಯವನ್ನು ಕುರಿತು ಕೇಳಿದೆನು. ನಿನ್ನನ್ನು ಆಸ್ಥಾನಕ್ಕೆ ಕರೆಯಿಸಬೇಕೆಂದು ಆಲೋಚಿಸುತ್ತಿರುವಾಗಲೇ, ದೇವಾಲಯದ ಕಾರ್ಯಕರ್ತರು ನನ್ನ ಬಳಿಗೆ ಬಂದು ನಿನ್ನ ವಿಷಯ ಹೇಳಿದರು. ಕಲಾಕಾರರಿಗೆ ಬರಕೂಡದ ಗರ್ವ ·ಅಹಂಕಾರಗಳು ನಿನ್ನಲ್ಲಿ ಪ್ರವೇಶಿಸಿದ್ದು ತಿಳಿಯಿತು. ಅದಕ್ಕಾಗಿ ನಾನೇ ಬಂದೆನು" ಎಂದನು.

ಮಾಳವಿಕಾಳಿಗೆ ಆದ ಆನಂದ ಆಶ್ಚರ್ಯಗಳಿಗೆ ಪಾರವಿಲ್ಲದಾಯಿತು. ಅವಳು ರಾಜಾಸ್ಥಾನದಲ್ಲಿ ನರ್ತಕಿಯಾಗಿ ಸೇರಿ, ಕೆಲವು ವರ್ಷಗಳಲ್ಲಿ ಪ್ರಧಾನ ರಾಜನರ್ತಕಿಯಾದಳು. ಆದರೂ ಅವಳು ಪ್ರತಿ ಉತ್ಸವ ಕಾಲದಲ್ಲಿಯೂ ಮಂದಾಕಿನೀ ಆಲಯದಲ್ಲಿ ನರ್ತನ ಮಾಡುವುದನ್ನು ಬಿಡಲಿಲ್ಲ.






(ಹಿಂದಿನ ಸಂಚಿಕೆಯಿಂದ ಮುಂದುವರಿದುದು)

ತಾನು ಸನ್ಯಾಸಿಯಾಗಬೇಕೆಂಬ ಆಲೋಚನೆಯನ್ನು ತಲೆಯೊಳಗೆ ಹೊಗಿಸಿಕೊಂಡ ಮಹಾಜನಕನು ರಾಜಭವನದ ಮೇಲಿನ ಅಂತಸ್ತಿನಲ್ಲಿ ಕುಳಿತುಕೊಂಡನು. ಯಾರೊಬ್ಬರನ್ನೂ ನೋಡುವುದನ್ನು ಬಿಟ್ಟನು. ಕೆಳಗಿಳಿದು ಬಾರದೆ ಅಲ್ಲಿಯೇ ಕುಳಿತುಕೊಂಡಿದ್ದನು. ಹಾಗೆಯೇ ನಾಲ್ಕು ತಿಂಗಳು ಕಳೆಯಿತು. ರಾಜಭವನವು ಅವನಿಗೆ ಒಂದು ಬಂದೀಖಾನೆಯಂತೆ ತೋರಿತು. ಹೇಗಾದರೂ ಅಲ್ಲಿಂದ ಹೊರಬೀಳಬೇಕೆಂದುಕೊಂಡು ಅದಕ್ಕೆ ತಕ್ಕ ಉಪಾಯ ಹುಡುಕಿದನು.

ಅವನು ತನ್ನ ನೌಕರನನ್ನು ಕರೆದು, ಕಾಷಾಯ ವಸ್ತ್ರಗಳನ್ನೂ, ಮಣ್ಣಿನ ಪಾತ್ರೆಯನ್ನೂ ತರುವಂತೆ ಹೇಳಿದನು. ಕ್ಷೌರಿಕನನ್ನು ಕರೆಯಿಸಿ ತಲೆಪೂರಾ ಬೋಳಿಸಿಕೊಂಡನು. ಮರುದಿನ ಅವನು ಕಾಷಾಯ ವಸ್ತ್ರಗಳನ್ನು ಧರಿಸಿ, ಒಂದು ಕೈಯಲ್ಲಿ ಮಣ್ಣಿನ ಪಾತ್ರವನ್ನೂ, ಇನ್ನೊಂದು ಕೈಯಲ್ಲಿ ಉದ್ದವಾದ ದಂಡವನ್ನೂ ಹಿಡಿದುಕೊಂಡು ಮೇಲಿನ ಅಂತಸ್ತಿನಿಂದ ಕೆಳಗಿಳಿದು ಬಂದನು. ರಾಣಿ ಅವನನ್ನು ನೋಡಿದಳಾದರೂ ಗುರುತಿಸಲಾಗದೆ ಹೋದಳು. ಯಾವನೋ ಸನ್ಯಾಸಿ ತನ್ನ ಪತಿಯೊಂದಿಗೆ ಮಾತಾಡಿ ಹೋಗುವನೆಂದು ತಿಳಿದಳು.

ಆದರೆ ಬೇಗದಲ್ಲೇ ನಿಜಸಂಗತಿ ಹೊರಬಿದ್ದಿತು. ಸೀವಲಿದೇವಿ ಮಾಳಿಗೆಯ ಮೇಲೆ ಹೋಗಿ ತನ್ನ ಗಂಡನ ತಲೆಕೂದಲು ಕೆಳಗೆ ಬಿದ್ದಿರುವುದನ್ನು ನೋಡಿದಳು. ಗಾಬರಿಯಾಗಿ ರಾಜಭವನದೊಳಗೆಲ್ಲಾ ಹುಡುಕಿಸಿದಳು. ರಾಜನ ಜಾಡು ಕಾಣಲಿಲ್ಲ. ಮಹಾರಾಜರು ಸನ್ಯಾಸ ಸ್ವೀಕಾರ ಮಾಡಿದರೆಂಬ ಸತ್ಯ ಸಂಗತಿ ನೌಕರರಿಂದ ತಿಳಿಯಿತು. ಎಲ್ಲರೂ ಗೊಳ್ಳನೆ ಗೋಳಾಡಿದರು. ಕೆಲವರು ಅಳುತ್ತಾ ಸನ್ಯಾಸಿ ಹೋದ ದಿಕ್ಕನ್ನು ಹಿಡಿದು ಹೋದರು. ಸೀವಲಿದೇವಿ ಉಳಿದ ರಾಣಿಯವರನ್ನು ತನ್ನೊಂದಿಗೆ ಕರೆದುಕೊಂಡು ಬೇಗಬೇಗನೆ ಹೋಗಿ ಪತಿಯನ್ನು ನೋಡಿ ತಿರುಗಿ ಬರುವಂತೆ ಬೇಡಿಕೊಂಡರೂ ಫಲಿತವೇನಿಲ್ಲದೆ ಹೋಯಿತು.

ಸೀವಲಿದೇವಿ ಸೇನಾನಾಯಕನನ್ನು ಕರೆದು ಅವನೊಂದಿಗೆ ರಹಸ್ಯವಾಗಿ, ನಗರದೊಳಗೆ ಅನೇಕ ಕಡೆಗಳಲ್ಲಿ ಬೆಂಕಿಯ ಉರಿ ಎಬ್ಬಿಸುವಂತೆ ಹೇಳಿದಳು.

ಅವನು ಹಾಗೆಯೇ ಮಾಡಿಸಿದನು. ಆಗ ರಾಣಿ ತನ್ನ ಗಂಡನ ಬಳಿಗೆ ಹೋಗಿ, "ಮಹಾರಾಜಾ, ನಿಮ್ಮ ಮಿಥಿಲಾ ನಗರಕ್ಕೆ ಬೆಂಕಿ ಹಿಡಿದಿದೆ. ನಿಮ್ಮ ಸಂಪತ್ತೆಲ್ಲವೂ ಬೆಂಕಿಯ ಪಾಲಾಗುತ್ತಿದೆ. ಅದನ್ನು ಕಾಪಾಡಿರಿ !" ಎಂದಳು.

"ರಾಣೀ, ನನ್ನದು ಸೊತ್ತು ಎಂಬುದೇನೂ ಇಲ್ಲದಿರುವಾಗ ನಾನು ಕಳೆದುಕೊಂಡೆನೆಂಬುದು ಹೇಗೆ ನಡೆಯುತ್ತದೆ ? ಅದು ಕೇವಲ ಭ್ರಮೆ!" ಎಂದನು ಮಹಾ ಜನಕ.

ಹೀಗೆ ಹೇಳಿ ಮಹಾ ಜನಕನು ಉತ್ತರದಿಕ್ಕಿನ ದ್ವಾರದಿಂದ ನಗರವನ್ನು ದಾಟಿ ಹೋದನು. ರಾಣಿಯೂ ಪ್ರಜೆಗಳೂ ಅವನ ಹಿಂದೆಯೇ ಹೋದರು. ಅವರಾರೂ ತನ್ನ ಹಿಂದೆ ಬಾರದಿರಲು ಅವನು ಹಿಂದಕ್ಕೆ ತಿರುಗಿ ಅವರೊಂದಿಗೆ, "ಈ ನಗರಕ್ಕೆ ಅಧಿಪತಿ ಯಾರೆಂದು ತಿಳಿದಿದ್ದೀರಿ ?" ಎಂದು ಕೇಳಿದನು. ಆ ವಿಚಿತ್ರ ಪ್ರಶ್ನೆಯನ್ನು ಕೇಳಿ, "ನೀವೇ ಮಹಾರಾಜರೇ !" ಎಂದರು ಎಲ್ಲರೂ.

"ಹಾಗಾದರೆ ಈ ಗೆರೆ ದಾಟಿದವರನ್ನು ದಂಡಿಸಿರಿ" ಎಂದು ಅವನು ತನ್ನ ದಂಡದಿಂದ ದಾರಿಗೆ ಅಡ್ಡವಾಗಿ ಒಂದು ಗೆರೆಯನ್ನು ಎಳೆದು, ಮುಂದಕ್ಕೆ ಹೋದನು.

ಮಂತ್ರಮುಗ್ಧರಾದ ಜನರು ಸ್ವಲ್ಪ ಹೊತ್ತು ಗೆರೆಯನ್ನು ದಾಟಲಿಲ್ಲ. ಆದರೆ ತನ್ನ ಗಂಡನು ಹೊರಟು ಹೋಗುತ್ತಾನೆಂಬ ಭಯಾತುರದಿಂದ ಸೀವಲೀದೇವಿ ಗೆರೆಯನ್ನು ದಾಟಿ ಮುಂದಕ್ಕೆ ಓಡಿದಳು. ಕೂಡಲೇ ಧೈರ್ಯ ತಂದುಕೊಂಡು ಜನರು ಕೂಡಾ ದಾಟಿದರು.

ಬೇಗದಲ್ಲೇ ರಾಣಿ ತನ್ನ ಗಂಡನನ್ನು ನೋಡಿ ಅವನ ಕಾಲಿಗೆ ಬಿದ್ದು, "ಈ ಪ್ರಜೆಗಳನ್ನು ನೋಡಿರಿ. ನೀವು ಹಿಂದಕ್ಕೆ ತಿರುಗಿಬರಬೇಕೆಂದು ಎಲ್ಲರೂ ಬೇಡಿಕೊಳ್ಳುತ್ತಿದ್ದಾರೆ. ಅವರ ಕೋರಿಕೆ ಮನ್ನಿಸಿರಿ !" ಎಂದಳು.

"ನಾನು ಅವರೆಲ್ಲರನ್ನೂ ಪರೀಕ್ಷಿಸಿದ್ದೇನೆ. ಆದುದರಿಂದ ಸ್ನೇಹಿತರನ್ನೂ, ಮನೆಯವರನ್ನೂ,



ಬಂಧು ಮಿತ್ರರನ್ನೂ, ಸಮಸ್ತವನ್ನೂ ವಿಸರ್ಜಿಸಿದ್ದೇನೆ" ಎಂದನು ಮಹಾಜನಕ.

"ನೀವು ಸನ್ಯಾಸಿಯಾದರೆ ನನ್ನ ಗತಿ ಏನು?" ಎಂದಳು ರಾಣಿ.

"ನಿನ್ನ ಕುಮಾರನು ಮನೋವಾಕ್ಕಾಯ ಕರ್ಮಗಳಿಂದ ಪಾಪಾಚರಣೆ ಮಾಡದೆ ರಾಜ್ಯಪಾಲನೆ ಮಾಡುವಂತೆ ನೋಡಿಕೊಂಡಿರು" ಎಂದನು ರಾಜ.

ಅವರು ಮಾತಾಡುತ್ತ ನಡೆಯುತ್ತಿರುವಾಗ ಸೂರ್ಯಾಸ್ತಮಾನವಾಯಿತು. ಆ ರಾತ್ರಿಗೆ ಸಮುಚಿತವಾದೊಂದು ಪ್ರದೇಶದಲ್ಲಿ ಮಜಿಲೀ ಏರ್ಪಾಡಾಯಿತು. ಮತ್ತೆ ಬೆಳಗಾದ ಕೂಡಲೇ ಮಹಾಜನಕನು ಎದ್ದು ಪ್ರಯಾಣ ಸಾಗಿಸಿದನು.

ರಾಣಿ ತನ್ನ ಪರಿವಾರವನ್ನು ಹಿಂದಿನಿಂದ ಮೆಲ್ಲನೆ ಬರುವಂತೆ ಹೇಳಿ, ತಾನು ಮಾತ್ರ ಗಂಡನ ಹಿಂದೆಯೇ ಹೋದಳು.

ಹಾಗೆ ಹೋಗಿ ಹೋಗಿ ಅವರು ಒಂದು ನಗರವನ್ನು ಸೇರಿದರು. ನಗರದ ದ್ವಾರದ ಹತ್ತಿರ ಕೆಲ ಮಂದಿ ಮಕ್ಕಳು ಆಡಿಕೊಂಡಿದ್ದರು. ಒಬ್ಬಳು ಹುಡುಗಿ ಮೊರದಲ್ಲಿ ಏನನ್ನೋ ಕೇರುತ್ತಿದ್ದಳು. ಅವಳ ಒಂದು ಕೈಯಲ್ಲಿ ಒಂದು ಬಳೆಯೂ, ಎರಡನೇ ಕೈಯಲ್ಲಿ ಎರಡು ಬಳೆಗಳೂ ಇದ್ದವು. ಅವಳು ಮೊರವನ್ನು ಎತ್ತಿ ಕೇರುವಾಗ ಒಂದು ಕೈಯ ಗಾಜುಗಳು ಶಬ್ದಿಸುತ್ತಿದ್ದುವು.

ಅದನ್ನು ನೋಡಿದ ಕೂಡಲೇ ಮಹಾಜನಕನಿಗೆ ಒಂದು ಆಲೋಚನೆ ಬಂತು. ಅವನು ತನ್ನ ಹೆಂಡತಿಗೆ ಒಂದು ಚಿಕ್ಕ ಪಾಠವನ್ನು ಕಲಿಸಿ ಮನೆಗೆ ಕಳುಹಿಸಿ ಬಿಡೋಣವೆಂದುಕೊಂಡು, ಆ ಕೇರುತ ಹುಡುಗಿಯೊಂದಿಗೆ, "ನೋಡಮ್ಮಾ, ನಿನ್ನ ಒಂದು ಕೈ ಮಾತ್ರವೇ ಶಬ್ದಮಾಡುತ್ತಿದೆ ಏಕೆ? ಎರಡನೆಯದು ಏಕೆ ಶಬ್ದಿಸುವುದಿಲ್ಲ?" ಎಂದು ಕೇಳಿದನು.

ಅದಕ್ಕೆ ಆ ಹುಡುಗಿ, "ಅಯ್ಯಾ, ಈ ಕೈಯಲ್ಲಿ ಎರಡು ಬಳೆಗಳಿರುವುದರಿಂದ ಶಬ್ದವಾಗುತ್ತದೆ. ಅಂಥ ಅನರ್ಥದ ಶಬ್ದ ಮಾಡುವ ರಗಳೆ ಇನ್ನೊಂದು ಕೈಗೆ ಇಲ್ಲ" ಎಂದಳು.



ರಾಜನು ಸೀವಲಿದೇವಿಯ ಕಡೆಗೆ ತಿರುಗಿ, "ಆ ಹುಡುಗಿ ಹೇಳಿದ ಮಾತು ಕೇಳಿದಿಯಾ? ಎರಡನೆಯದು ಅನರ್ಥದ, ಶಬ್ದ ಹುಟ್ಟಿಸುವ ಕೈ. ನಾನು ನಿನ್ನನ್ನು ನನ್ನ ಹಿಂದೆ ಬರಲು ಬಿಟ್ಟರೆ ಆ ಹುಡುಗಿ ಹೇಳಿದ ನೀತಿಯನ್ನು ತಪ್ಪಿದವನಾಗುತ್ತೇನೆ" ಎಂದನು.

ರಾಣಿ ತಲೆ ತಗ್ಗಿಸಿಕೊಂಡು ತನ್ನ ಗಂಡನನ್ನು ಮುಂದಕ್ಕೆ ಹೋಗಲು ಬಿಟ್ಟಳು. ಆದರೆ ಮರುಕ್ಷಣವೇ ಅವಳಿಗೆ ದುಃಖವು ಉಕ್ಕಿ ಬಂದಿತು. ಕೂಡಲೇ ಅವಳು ಓಡಿ ಹೋಗಿ ತನ್ನ ಗಂಡನನ್ನು ಕಲೆತುಕೊಂಡು ಅವನೊಂದಿಗೆ ನಡೆಯ ತೊಡಗಿದಳು. ಅವರಿಬ್ಬರೂ ಸ್ವಲ್ಪ ದೂರ ನಡೆದು ಒಬ್ಬ ಕಮ್ಮಾರನ ಕೊಟ್ಟಿಗೆಯ ಹತ್ತಿರ ಬಂದರು.

ಅಲ್ಲಿ ಕಮ್ಮಾರನು ಬಾಣವನ್ನು ತಯಾರುಮಾಡಿಕೊಂಡಿದ್ದನು. ಬಾಣದ ಮೊನೆ ಸರಿಯಾಗಿದೆಯೋ ಇಲ್ಲವೋ ಎಂದು ನೋಡಲು ಅವನು ಬಾಣವನ್ನು ತನ್ನ ಕಣ್ಣಿನ ಮುಂದೆ ಹಿಡಿದು ಎರಡನೇ ಕಣ್ಣನ್ನು ಮುಚ್ಚಿಕೊಂಡನು.

"ಅಪ್ಪಾ, ನೋಡಲು ನಿನಗೆ ಎರಡು ಕಣ್ಣುಗಳಿರುವಾಗ ಒಂದು ಕಣ್ಣನ್ನು ಮುಚ್ಚಿಕೊಂಡೆ ಏಕೆ?" ಎಂದು ಮಹಾಜನಕ ರಾಜನು ಕಮ್ಮಾರನನ್ನು ಕೇಳಿದನು.

"ಎರಡು ಕಣ್ಣುಗಳನ್ನೂ ತೆರೆದರೆ ಮೊನೆ ನೆಟ್ಟಗಿದೆಯೋ ತಿಳಿಯುತ್ತದೇನು? ಬಾಣವು ಬಾಗಿಲ್ಲದೆ ನೇರಾಗಿದೆಯೋ ಇಲ್ಲವೋ ತಿಳಿಯಬೇಕಾದರೆ ಒಂದು ಕಣ್ಣಿನಿಂದಲೇ ನೋಡಬೇಕು. ಎರಡನೆಯದು ಸೇರಿದರೆ ಅನರ್ಥದ ನೋಟವೇ ಆಗುತ್ತೆ!" ಎಂದನು ಕಮ್ಮಾರ.

"ಕೇಳಿದೆಯಾ ದೇವೀ?" ಎಂದನು ಮಹಾಜನಕ ತನ್ನ ಹೆಂಡತಿಯನ್ನು ನೋಡಿ. ತನ್ನ ಗಂಡನು ಇನ್ನು ತನಗೆ ದಕ್ಕಲಾರನೆಂದು ಸೀವಲಿದೇವಿಗೆ ತಿಳಿಯಿತು. ಆ ಸಂಕಟದಿಂದ ಅವಳು ಬೋದ ತಪ್ಪಿ ಬಿದ್ದುಬಿಟ್ಟಳು. ಆ ಸಮಯದಲ್ಲಿ ಮಹಾ ಜನಕನು ಮುಂದೆ ಸಾಗಿ ಅರಣ್ಯದೊಳಗೆ ಎತ್ತಲೋ ಹೊರಟು ಹೋದನು.

ಬೇಗದಲ್ಲೇ ಪರಿವಾರದವರು ಬಂದರು. ಮೂರ್ಛೆ ಬಿದ್ದ ರಾಣಿಯನ್ನು ಶೈತ್ಯೋಪಚಾರ ಮಾಡಿ ಎಬ್ಬಿಸಿದರು. ಅವಳು ಮಿಥಿಲಾ ನಗರಕ್ಕೆ ಹಿಂದಿರುಗಿ ತನ್ನ ಕುಮಾರನಿಗೆ ರಾಜ್ಯಾಭಿಷೇಕವನ್ನು ಮಾಡಿಸಿದಳು. ಆಮೇಲೆ ಅವಳು ರಾಜಭವನದೊಳಗೆ ಕಾಲಿಡಲಿಲ್ಲ. ತೋಟದಲ್ಲೊಂದು ಪರ್ಣಶಾಲೆ ಕಟ್ಟಿಸಿಕೊಂಡು ಸನ್ಯಾಸಿನಿಯ ಹಾಗೆ ಜೀವಿಸಿದಳು. ಮಹಾ ಜನಕನು ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿ ಸಿದ್ಧಿ ಸಂಪಾದಿಸಿದನು.





**ನಮ್ಮ ದೇವಾಲಯಗಳು :**

## ಬದರೀನಾಥ್—ಕೇದಾರನಾಥ್

ಪುರಾತನ ಕಾಲದಿಂದಲೂ ಭಾರತೀಯರು ಹಿಮಾಲಯ ಪರ್ವತಗಳನ್ನು ಪವಿತ್ರವಾಗಿಯೇ ಭಾವಿಸುತ್ತಿದ್ದರು. ಮಹಾಕವಿ ಕಾಳಿದಾಸನು ಹಿಮಾಲಯವನ್ನು 'ದೇವತಾತ್ಮ' ಎಂದು ವರ್ಣಿಸಿದ್ದಾನೆ. ದೇವತೆಗಳು, ಗಂಧರ್ವರು, ಯಕ್ಷರು ಅಲ್ಲಿ ವಾಸಮಾಡುವರೆಂಬ ನಂಬುಗೆ ಯಿದೆ. ಜೀವನದಿಗಳೆಲ್ಲಾ ಹಿಮಾಲಯದಿಂದಲೇ ಹುಟ್ಟಿ ಪ್ರವಹಿಸುತ್ತವೆ

ಅನೇಕ ಮಂದಿ ಜಿಜ್ಞಾಸುಗಳಾದ ಸಾಧುಗಳು ಧ್ಯಾನ ಮಾಡಲು ಪ್ರಶಾಂತ ವಾತಾವರಣವನ್ನು ಹುಡುಕುತ್ತ ಹಿಮಾಲಯಗಳಿಗೆ ಹೋಗುತ್ತಿರುವರು. ಯುಗ ಯುಗಗಳಿಂದ ಅಸಂಖ್ಯಾಕರಾದ ಸನ್ಯಾಸಿಗಳು ಹಿಮಾಲಯಗಳಲ್ಲಿದ್ದಾರೆ. ಈ ಪರ್ವತಗಳಲ್ಲಿ ಅನೇಕ ಪವಿತ್ರ ಸ್ಥಳಗಳಿವೆ.





ಹಿಮಾಲಯಗಳಲ್ಲಿರುವ ಪವಿತ್ರ ಸ್ಥಳಗಳಲ್ಲಿ ಬದರೀನಾಥ್ ಪ್ರಧಾನವಾಗಿದೆ. ವಿಷ್ಣು ಕ್ಷೇತ್ರವಾದ ಈ ಪವಿತ್ರ ಸ್ಥಳದಲ್ಲಿಯೇ ವ್ಯಾಸ ಮಹರ್ಷಿ ಮಹಾ ಭಾರತವನ್ನು ಹೇಳುತ್ತಾ ಇರಲು ವಿಘ್ನೇಶ್ವರನು ಬರೆದನು !




ಬಹಳ ಕಾಲದ ಹಿಂದೆಯೇ ಬದರೀನಾಥದಲ್ಲಿ ವಿಷ್ಣು ಆಲಯ ನಿರ್ಮಿಸಲ್ಪಟ್ಟಿತ್ತು. ಆದರೆ ಅದು ಬೆಟ್ಟದ ಭಾಗವು ಮುರಿದು ಬಿದ್ದು ನಾಶವಾಗಿ ಹೋಯಿತೆಂದು ಭಾವಿಸಲಾಗುತ್ತದೆ. ಆಗ ಇದ್ದ ದೇವರ ವಿಗ್ರಹವು ಅಲಕಾನಂದ ನದಿಯಲ್ಲಿ ಮುಳುಗಿ ಹೋಯಿತು.

ಆದಿ ಶಂಕರರು ಭಾರತ ಯಾತ್ರೆಯ ಸಂದರ್ಭದಲ್ಲಿ ಈ ಸ್ಥಳವನ್ನು ಕೂಡಾ ಸಂದರ್ಶಿಸಿದರು. ಧ್ಯಾನದ ಮೂಲಕ ದೇವರ ವಿಗ್ರಹವು ಎಲ್ಲಿರುವುದೆಂದು ಕಂಡುಹಿಡಿದು ಅದನ್ನು ತಂದು ನೂತನವಾಗಿ ನಿರ್ಮಿಸಲ್ಪಟ್ಟ ಆಲಯದಲ್ಲಿ ಪುನಃ ಪ್ರತಿಷ್ಠೆ ಮಾಡಿಸಿ, ಪೂಜಾದಿಗಳಿಗೆ ಏರ್ಪಾಡು ಮಾಡಿದರು.





ಆದಿ ಶಂಕರರು ಮಾಡಿಸಿದ ಏರ್ಪಾಡುಗಳು ಈಗಲೂ ನಡೆಯುತ್ತಿವೆ. ಒಂದು ಕಾಲದಲ್ಲಿ ಕಾಲ್ನಡಿಗೆಯಿಂದ ಈ ಗುಡಿಗೆ ಹೋಗಬೇಕಾದರೆ ಎಷ್ಟೋ ಕಷ್ಟನಷ್ಟಗಳನ್ನು ಇದಿರಿಸಬೇಕಾಗಿತ್ತು. ಆದರೆ ಈಗ ಹೋಗಿಬರಲು ವಾಹನಗಳು ಲಭ್ಯವಾಗುತ್ತವೆ.

ವಿಪರೀತವಾಗಿ ಮಂಜು ಸುರಿಯುವುದರಿಂದ ಸಂವತ್ಸರದಲ್ಲಿ ಆರು ತಿಂಗಳವರೆಗೆ ಈ ದೇವಾಲಯ ಮುಚ್ಚಿಕೊಂಡಿರುತ್ತದೆ. ಆ ಸಮಯದಲ್ಲಿ ಆಲಯದ ಪೂಜಾರಿಗಳು ಅಲ್ಲಿ ಇರಲಿಕ್ಕೂ, ಯಾತ್ರಿಕರು ಬರಲಿಕ್ಕೂ ಸಾಧ್ಯವಾಗುವುದಿಲ್ಲ. ಆದರೆ ಆಗ ದೇವರ ಪೂಜೆಗಳು ಮಾತ್ರ ನಿಲ್ಲಲಾರವು. ಆ ದೇವ ವಿಗ್ರಹದ ಪ್ರತಿರೂಪಕ್ಕೆ ಜೋಷಿ ಮಠದಲ್ಲಿ ಪೂಜೆಗಳು ನಡೆಯುತ್ತವೆ.





ಆಲಯವನ್ನು ಮುಚ್ಚುವುದಕ್ಕೆ ಮೊದಲು ಪೂಜಾರಿ ಗುಡಿಯೊಳಗಿನ ವಿಗ್ರಹದ ಮುಂದೆ ದೀಪ ಬೆಳಗಿಸುತ್ತಾನೆ. ಬೇಸಗೆ ಪ್ರಾರಂಭವಾದ ಮೇಲೆ ಗುಡಿಯ ಬಾಗಿಲು ತೆರೆಯುವಾಗ ಆ ದೀಪ ಬೆಳಗಿಕೊಂಡೇ ಇರುತ್ತದೆ. ಇದು ಬಹಳ ಕಾಲದಿಂದ ನಡೆದು ಬರುವ ದೊಡ್ಡ ವಿಶೇಷವೆಂದು ಹೇಳುವರು.

ಸಮುದ್ರ ಮಟ್ಟಕ್ಕೆ ೧೧,೭೫೫ ಅಡಿ ಎತ್ತರದಲ್ಲಿ ಕೇದಾರನಾಥ್ ಆಲಯವಿದೆ. ಅದು ಸುಪ್ರಸಿದ್ಧವಾದ ಶಿವಕ್ಷೇತ್ರ. ಇಲ್ಲಿಗೆ ಬರುವುದು ಬಹಳ ಕಷ್ಟಸಾಧ್ಯವಾಗಿದ್ದರೂ, ಶತಕಾಂತರಗಳಿಂದ ಅಸಂಖ್ಯಾಕರಾದ ಭಕ್ತರು ಯಾತ್ರೆ ಮಾಡಿಕೊಂಡೇ ಇದ್ದಾರೆ.





ಪಂಚಪಾಂಡವರು ದ್ರೌಪದೀ ಸಹಿತರಾಗಿ ಈ
ಮಾರ್ಗದ ಮೂಲಕವೇ ಮಹಾ ಪ್ರಸ್ಥಾನ
ಸಾಗಿಸಿದರಂತೆ. ದಾರಿಯಲ್ಲಿ ಮೊದಲು
ದ್ರೌಪದಿ ಮರಣ ಹೊಂದಿದಳು. ಆಮೇಲೆ
ಸಹದೇವನು ಮಾರ್ಗಾಯಾಸ ತಾಳಲಾಗದೆ
ಕೇದಾರನಾಥದ ಸಮೀಪದಲ್ಲಿ ಸತ್ತನು.

ರುದ್ರ ಹಿಮಾಲಯವೆಂದು ಹೆಸರು ಪಡೆದ
ಈ ಪ್ರಾಂತದಲ್ಲಿ ಶಿವಸ್ವರೂಪವನ್ನು ಸಂದರ್ಶಿಸಿ
ಧರ್ಮರಾಜನು ಪೂಜಿಸಿದನಂತೆ. ಆಗಿನಿಂದ
ಕೇದಾರನಾಥದಲ್ಲಿ ಶಿವಾರಾಧನೆ ಪ್ರಾರಂಭವಾಗಿ
ಈ ದಿನಗಳಲ್ಲಿಯೂ ಸಾಗಿಕೊಂಡಿದೆ.





ಭಕ್ತಿಯಿಂದ ಯಾತ್ರಿಕರು ಮಾರ್ಗ ಮಧ್ಯದಲ್ಲಿ
ರುವ ಕಷ್ಟಗಳನ್ನು ಸಾಹಸದಿಂದ ಅಧಿಗಮಿ
ಸುತ್ತ ಕೇದಾರನಾಥನನ್ನು ದರ್ಶನ ಮಾಡು
ತ್ತಾರೆ. ಬದರೀನಾಥದಂತೆಯೇ ಕೇದಾರನಾಥನ
ಆಲಯ ಕೂಡಾ ಸಂವತ್ಸರದಲ್ಲಿ ಆರು ತಿಂಗಳು
ಮುಚ್ಚಲ್ಪಟ್ಟಿರುತ್ತದೆ. ಆ ಸಮಯದಲ್ಲಿ ಆ
ದೈವ ವಿಗ್ರಹದ ಪ್ರತಿರೂಪಕ್ಕೆ ಉಖೀ ಮಠ
ದಲ್ಲಿ ಪೂಜೆ ಮಾಡುತ್ತಾರೆ.



# ವಿಜಯದ ರಹಸ್ಯ

ಉಜ್ಬೆಕಿಸ್ತಾನದೊಳಗಿನ ಒಂದು ರಾಜ್ಯಕ್ಕೆ ಕಮಲುದ್ದೀನ್ ಎಂಬ ಯುವಕನು ಸುಲ್ತಾನನಾಗಿ ಸಿಂಹಾಸನವೇರಿದನು. ಅವನು ಯಾವಾಗ ನೋಡಿದರೂ, ಔತಣ ಕೂಟದಲ್ಲಿಯೂ ವಿನೋದ ವಿಲಾಸಗಳಲ್ಲಿಯೂ ಮುಳುಗಿ ತೇಲುತ್ತ ಕಾಲ ಕಳೆಯುತ್ತಿದ್ದನೇ ಹೊರತು, ಪರಿಪಾಲನೆಯ ವ್ಯವಹಾರಗಳನ್ನಾಗಲೀ, ಪ್ರಧಾನ ಸಮಸ್ಯೆಗಳನ್ನಾಗಲೀ ಯೋಚಿಸುತ್ತಿರಲಿಲ್ಲ. ತನಗೆ ಅವುಗಳ ಸಂಬಂಧವೇ ಇಲ್ಲದಂತೆ ಅವುಗಳನ್ನು ನೋಡಿಕೊಳ್ಳಲು ಬೇರೆಯವರಿದ್ದಾರೆಂಬಂತೆ ಪ್ರವರ್ತಿಸುತ್ತಿದ್ದನು. ಕಡೆಗೆ ಅದು ದೊಡ್ಡದೊಂದು ಗಂಡಾಂತರಕ್ಕೆ ಕಾರಣವಾಯಿತು.

ಒಂದು ದಿನ ಸುಲ್ತಾನನು ಒಂಟಿಯಾಗಿದ್ದ ಸಮಯ ನೋಡಿ, ಪ್ರಧಾನ ಮಂತ್ರಿ ಅವನ ಬಳಿಗೆ ಬಂದು, "ಪ್ರಭೂ, ನಮ್ಮ ರಾಜ್ಯದ ಮೇಲೆ ಪಕ್ಕದ ರಾಜ್ಯದ ಸುಲ್ತಾನನು ದಂಡೆತ್ತಿ ಬರುತ್ತಿದ್ದಾನೆಂದು ಚಾರರ ಮೂಲಕ ಗೊತ್ತಾಗಿದೆ. ಆ ದಾಳಿಯನ್ನು ಇದಿರಿಸಲಿಕ್ಕೆ ನಾವು ಕೂಡಲೇ ತಯಾರಾಗ ಬೇಕಾಗಿದೆ. ಎಲ್ಲರೂ ತಮ್ಮ ಅಪ್ಪಣೆಗಾಗಿ ಕಾದುಕೊಂಡಿದ್ದಾರೆ" ಎಂದನು.

ಸುಲ್ತಾನನು ಮಂತ್ರಿಯನ್ನು ಅವಹೇಳನೆಯಿಂದ ಹುಬ್ಬು ಸುರುಗಿಸಿ ನೋಡುತ್ತ, "ನಮ್ಮ ಹತ್ತಿರ ದೊಡ್ಡ ಸೈನ್ಯವಿದೆ. ಧೈರ್ಯ ಸಾಹಸಗಳಿರುವ ಸೇನಾನಾಯಕರಿದ್ದಾರೆ. ಹಾಗಿರುವಾಗ ಯಾರ ದಾಳಿಗೂ ನಾವು ಭಯಪಡ ಬೇಕಾಗಿಲ್ಲ. ಬಂದವರನ್ನು ಓಡಿಸುವುದನ್ನು ಬಿಟ್ಟು ಇದೊಂದು ದೊಡ್ಡ ಸಮಾಚಾರವೆಂದು ಹೇಳುವಿರಲ್ಲಾ!" ಎಂದನು.

ಪ್ರಧಾನ ಮಂತ್ರಿ ಮತ್ತೇನೂ ಮಾತಾಡದೆ ಅಲ್ಲಿಂದ ಹೊರಟು ಹೋದನು.

ಆಮೇಲೆ ಒಂದು ವಾರ ಕಳೆಯುವಷ್ಟರಲ್ಲಿ ಮಂತ್ರಿ ಎಚ್ಚರಿಸಿದಂತೆಯೇ ಒಂದು ದಿನ ರಾತ್ರಿ ಶತ್ರು ಸೈನಿಕರು ಬಂದು ಕೋಟೆಯನ್ನು ಮುತ್ತಿಗೆ ಹಾಕಿದರು. ಸೇನಾ ನಾಯಕರು ಸೈನ್ಯವನ್ನು ನಡೆಸಿ ಶತ್ರುಗಳನ್ನು ಹೊಡೆದೋಡಿಸಲು ಬಹಳವಾಗಿ ಹೆಣಗಿದರು. ಆದರೆ ಶತ್ರು ಸೈನಿಕರ ತೀವ್ರತೆಯನ್ನು ತಾಳಲಾಗದೆ ಹೋದರು. ಕೋಟೆ ಶತ್ರುಗಳ ವಶವಾಯಿತು. ಶತ್ರುಗಳು ನಗರದೊಳಗೆ ನುಗ್ಗಿದರು.

ಸುಲ್ತಾನ ಕಮಲುದ್ದೀನ್ ಇನ್ನೇನೂ ಮಾಡಲಾಗದೆ ಅಲ್ಲಿಂದ ರಹಸ್ಯ ಮಾರ್ಗದ ಮೂಲಕ ತಪ್ಪಿಸಿ

ಅರೇಬಿಯಾ ಕಥೆ

ಕೊಂಡು ಹೋಗಿ, ತನ್ನ ಬಂಧುವಾದ ಮತ್ತೊಬ್ಬ ಸುಲ್ತಾನನ ಕೋಟೆಯೊಳಗೆ ಹೊಕ್ಕು ಅವನ ಆಶ್ರಯದ ಮರೆಯಲ್ಲಿ ಇರತೊಡಗಿದನು.

ಒಂದು ದಿನ ಕಮಲುದ್ದೀನ್ ತನ್ನ ಆ ಬಂಧುವಿನೊಂದಿಗೆ, "ಕಳೆದುಕೊಂಡ ನನ್ನ ರಾಜ್ಯವನ್ನು ನಾನು ಮತ್ತೆ ಸಂಪಾದಿಸಿಕೊಳ್ಳಲು ನಿನ್ನ ಸೈನ್ಯವನ್ನು ಸಹಾಯವಾಗಿ ಕೊಟ್ಟರೆ ಉಪಕಾರವಾಗುತ್ತಿತ್ತು" ಎಂದು ಕೇಳಿದನು.

ಅದಕ್ಕೆ ಬಂಧುವಾದ ಸುಲ್ತಾನನು ಒಪ್ಪಿ, "ನೀನು ನಿನ್ನ ರಾಜ್ಯವನ್ನು ಮತ್ತೆ ಸಂಪಾದಿಸುವುದಾದರೆ ನನಗೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೆ ಇಲ್ಲ. ಅಗತ್ಯವಾಗಿ ಸೈನ್ಯವನ್ನು ಕೊಡುತ್ತೇನೆ" ಎಂದು ಹೇಳಿ ಕಮಲುದ್ದೀನನೊಂದಿಗೆ ಬೇಕಾದಷ್ಟು ಸೈನ್ಯವನ್ನು ಕೊಟ್ಟು ಕಳುಹಿಸಿದನು.

ಹಾಗೆ ಸೈನ್ಯವನ್ನು ಹೊರಡಿಸಿಕೊಂಡು ಕಮಲುದ್ದೀನ್ ಸ್ವಲ್ಪ ದೂರ ಪ್ರಯಾಣ ಮಾಡುವಾಗ, ದಾರಿಯಲ್ಲಿ ಒಂದು ಕಡೆ ತಣ್ಣಗಿನ ನೆರಳನ್ನು ಕೊಡುವ ದೊಡ್ಡದೊಂದು ಮರವು ಕಂಡಿತು. ಅದನ್ನು ನೋಡಿದ ಕೂಡಲೇ, "ಇಷ್ಟೊಂದು ಮಂದಿ ಸೈನಿಕರಿರುವಾಗ, ಇವರು ಬಹು ಸುಲಭವಾಗಿ ಕೋಟೆಯನ್ನು ಜಯಿಸಿ ನನಗೆ ಒಪ್ಪಿಸುತ್ತಾರೆ. ಅದಕ್ಕೆ ನಾನು ಕೂಡಾ ಏತಕ್ಕೆ ಹೋಗಲಿ ?" ಎಂದು ಆಲೋಚಿಸಿಕೊಂಡನು ಕಮಲುದ್ದೀನ್.

ಅವನು ಸೇನಾ ನಾಯಕನನ್ನು ಕರೆದು, "ನೀವು ಹೋಗಿ ಶತ್ರು ಸೈನಿಕರನ್ನು ಓಡಿಸಿ, ನನಗೆ ಸಮಾಚಾರ ತಿಳಿಸಿರಿ. ನಾನು ಈ ಮರದ ನೆರಳಿನಲ್ಲಿರುತ್ತೇನೆ" ಎಂದು ಅಪ್ಪಣೆಕೊಟ್ಟನು.

ಅದರಂತೆ ಸೈನ್ಯವು ಮುಂದಕ್ಕೆ ಹೊರಟು ಹೋಯಿತು. ಕಮಲುದ್ದೀನ್ ಕುದುರೆಯನ್ನು ಮರದ ಕಾಂಡಕ್ಕೆ ಕಟ್ಟಿ, ಆ ಮರದ ಕೆಳಗೆ ಕುಳಿತುಕೊಂಡು, ದ್ರಾಕ್ಷಾರಸ ಕುಡಿಯುತ್ತಾ, ತನ್ನ ಸೈನ್ಯವು ಕೋಟೆಯನ್ನು ವಶಪಡಿಸಿಕೊಳ್ಳುವ ವಿಜಯವಾರ್ತೆಗಾಗಿ ಕನಸು ಕಾಣತೊಡಗಿದನು. ಆದರೆ ಸಾಯಂಕಾಲವಾಗುವಷ್ಟರಲ್ಲಿ ಅನೇಕ ಮಂದಿ ಸೈನಿಕರು



ಯುದ್ಧದಲ್ಲಿ ಸತ್ತರೆಂದೂ, ಉಳಿದವರು ಶತ್ರುಗಳಿಗೆ ಬಂದಿಗಳಾಗಿ ಸಿಕ್ಕಿಬಿದ್ದರೆಂದೂ ಕಮಲುದ್ದೀನನಿಗೆ ವರ್ತಮಾನ ಬಂದಿತು !

ಆ ವಾರ್ತೆ ಕೇಳಿದ ಕೂಡಲೇ ಅವನಿಗೆ ಬುದ್ಧಿ ಸ್ತಂಭನವಾಯಿತು. ಇನ್ನು ತನ್ನ ಮುಖವನ್ನು ಬಂಧುವಿಗೆ ತೋರಿಸುವುದೆಂತು ? ಅಲ್ಲಿಂದ ಕಮಲುದ್ದೀನ್ ಹುಚ್ಚನ ಹಾಗೆ ಎಲ್ಲೆಲ್ಲೋ ಹೋದನು. ಸಿಕ್ಕಸಿಕ್ಕಲ್ಲಿ ನಾನಾ ಅವಸ್ಥೆಗಳಿಗೆ ಗುರಿಯಾಗಿ ಕಟ್ಟ ಕಡೆಗೆ ಖದೀದಾನ್ ಎಂಬ ಸುಲ್ತಾನನ ಆಸ್ಥಾನದಲ್ಲಿ ಉದ್ಯೋಗಕ್ಕೆ ಸೇರಿದನು.

ಅಲ್ಲಿರುವಾಗ ಕಮಲುದ್ದೀನ್, ಖದೀದಾನ್ ಹತ್ತಿರವಿದ್ದ ಸೈನ್ಯಗಳನ್ನು ನೋಡಿ "ಇಷ್ಟು ದೊಡ್ಡ ಸೈನ್ಯವು ನನಗಿರುತ್ತಿದ್ದರೆ ಕಳೆದುಕೊಂಡ ನನ್ನ ರಾಜ್ಯವನ್ನು ಕ್ಷಣಮಾತ್ರದಲ್ಲಿ ಜಯಿಸಿಬಿಡಬಹುದು" ಎಂದು ಬಾಯಿಯಲ್ಲಿ ಒಸರಿಳಿಸಿಕೊಳ್ಳುತ್ತಿದ್ದನು. ಆದರೂ ತಾನು ಯಾರೆಂಬುದನ್ನು ಹೇಳಲಿಲ್ಲ. ತನಗೆ ಏರ್ಪಟ್ಟ ದುಸ್ಥಿತಿಗೆ ಚಿಂತಿಸುತ್ತ, ಸುಲ್ತಾನನ ಅಂಗರಕ್ಷಕನ ಪದವಿಗೆ ಏರಿ, ಕಾಲಕಳೆಯ ತೊಡಗಿದನು. ಹಾಗಿರುವಾಗ ಒಂದುಸಾರಿ ಪಕ್ಕದ ರಾಜ್ಯದ ರಾಜನ ಸೈನಿಕರು ಹಠಾತ್ತಾಗಿ ಬಂದು ಖದೀದಾನ್ ಕೋಟೆಯನ್ನು ಮುತ್ತಿಗೆಹಾಕಿದರು. ಆಗ ಸುಲ್ತಾನ್ ಖದೀದಾನ್ ಸ್ವಯಂಸೇನೆಗೆ ನಾಯಕತ್ವ ವಹಿಸಿ ಶತ್ರುಸೇನೆಗಳನ್ನು ಇದಿರಿಸಿದನು. ಅವನ ಸೈನ್ಯದೊಂದಿಗೆ ಯೋಧಾನುಯೋಧರಾದ ಸೈನಿಕರೂ ಅಪೂರ್ವವಾದ ಧೈರ್ಯಸಾಹಸಗಳಿಗೆ ಹೆಸರಾದ ಸೇನಾನಾಯಕರೂ ಇದ್ದರು. ಆದರೂ ಖದೀದಾನ್ ಸೇನೆಗೆ ಸ್ವಯಂನಾಯಕತ್ವ ವಹಿಸಿ ಯುದ್ಧಕ್ಕೆ ಹೋದುದನ್ನು ನೋಡಿ ಕಮಲುದ್ದೀನನಿಗೆ ಆಶ್ಚರ್ಯವಾಯಿತು.

ಯುದ್ಧದಲ್ಲಿ ಖದೀದಾನ್ ಸೈನಿಕರು ಶತ್ರು ಸೈನಿಕರನ್ನು ಅವಲೀಲೆಯಿಂದ ಹೊಡೆದು ಸೋಲಿಸಿ ಓಡಿಸಿಬಿಟ್ಟರು.

ಮರುದಿನ ಕಮಲುದ್ದೀನ್ ಖದೀದಾನನ ಬಳಿಗೆ ಬಂದು, "ಪ್ರಭೂ, ನಿಮಗೆ ಸಮರ್ಥರಾದ ದೊಡ್ಡ



ದೊಡ್ಡ ಸೇನಾನಾಯಕರೂ ಅಸಂಖ್ಯಾಕರಾದ ವೀರ ಸೈನಿಕರೂ ಇರುವಾಗ ತಾವೇ ಏಕೆ ಪ್ರಾಣದ ಆಸೆ ಬಿಟ್ಟು ನಾಯಕತ್ವವಹಿಸಿ ಯುದ್ಧರಂಗಕ್ಕೆ ಪ್ರವೇಶಿಸಿದಿರೆಂಬುದು ನನಗೆ ಅರ್ಥವಾಗಲಿಲ್ಲ" ಎಂದನು.

"ಕೇವಲ ಸಮರ್ಥರಾದ ಸೇನಾನಾಯಕರೂ, ದೊಡ್ಡ ಸೈನ್ಯವೂ ವಿಜಯವನ್ನು ಸಾಧಿಸುವುದೆಂದು ನಂಬುವುದು ಸರಿಯಲ್ಲ. ರಾಜ್ಯಾಧೀಶನಾದ ಸುಲ್ತಾನನೇ ಮುಂದಿದ್ದು ಅವರನ್ನು ನಡೆಸಿದರೇನೇ ಅವರಿಗೆ ಉತ್ಸಾಹ ಬರುತ್ತದೆ. ತಮ್ಮ ಶೌರ್ಯ ಸಾಹಸಗಳನ್ನು ತಮ್ಮ ಒಡೆಯನೇ ಖುದ್ದು ನೋಡುತ್ತಿದ್ದಾನೆಂಬ ಆನಂದದಲ್ಲಿ ಯುದ್ಧಮಾಡುತ್ತಾರೆ. ವಿಜಯವೂ ದೊರೆಯುತ್ತದೆ. ವಿಜಯದ ರಹಸ್ಯವು ಇದೇ" ಎಂದನು ಮುಗುಳು ನಗುತ್ತ ಖದೀದಾನ್.

ಖದೀದಾನ್ ಹೇಳಿದ ಮಾತುಗಳನ್ನು ಕೇಳಿದಾಗ, ಆ ಮಾತಿನ ಸತ್ಯವು ಕಮಲುದ್ದೀನನಿಗೆ ಅರ್ಥವಾಯಿತು. ಅವನು ತಾನು ಯಾರೆಂಬುದನ್ನು ಖದೀದಾನನೊಂದಿಗೆ ಹೇಳಿ ಆ ರಾತ್ರಿಯೇ ಅಲ್ಲಿಂದ ಹೊರಟು ಬೆಳಗಾಗುವಷ್ಟರಲ್ಲಿ ತನ್ನ ದೇಶದ ಕೋಟೆಯ ದ್ವಾರವನ್ನು ಸೇರಿದನು.

ಕೋಟೆಯ ದ್ವಾರವನ್ನು ಕಾವಲುಕಾಯುವ ಸೈನಿಕರು ಅವನನ್ನು ಗುರುತಿಸದೆ, ಒಳಗೆ ಹೋಗಲು ಬಿಡದೆ ತಡೆದರು.

"ಏನಿದು ? ನನ್ನ ಸೈನಿಕರಾದ ನೀವು ನನ್ನ ಗುರುತು ಹಿಡಿಯಲಿಲ್ಲವೇ ? ನಾನು ನಿಮ್ಮ ಸುಲ್ತಾನ್ ಕಮಲುದ್ದೀನ್" ಎಂದನು ಗಟ್ಟಿಯಾಗಿ. ಆಗ ಪಕ್ಕದಲ್ಲಿದ್ದ ಒಂದು ಭವನದಲ್ಲಿ ಕೆಲವು ಮಂದಿ ಅಧಿಕಾರಿಗಳು ಸೇರಿ, ಬಂಡಾಯವೆಬ್ಬಿಸಿ, ದುರಾಕ್ರಮಣದಿಂದ ರಾಜ್ಯ ಹಿಡಿದ ಹೊಸ ಸುಲ್ತಾನನನ್ನು ಓಡಿಸಬೇಕೆಂದು ಮಸಲತ್ತು ನಡೆಸುತ್ತಿದ್ದರು. ಆ ಸುಲ್ತಾನನ ದುಷ್ಟ ಪರಿಪಾಲನೆಯಿಂದ ಅವರೆಲ್ಲರೂ ಕಷ್ಟಗಳಿಗೆ ಬಿದ್ದಿದ್ದರು. ಅವರು ಕಮಲುದ್ದೀನನ ಕಂಠಸ್ವರವನ್ನು ಕೇಳಿ ಅಲ್ಲಿಗೆ ಬಂದು ಅವನ ಗುರುತು ಹಿಡಿದು ನಮಸ್ಕಾರ ಮಾಡಿದರು.

ಅನಂತರ ಕಮಲುದ್ದೀನ್ ರಾಜ್ಯದೊಳಗೆ ರಹಸ್ಯವಾಗಿರುತ್ತ, ಅಧಿಕಾರಿಗಳು ಮಾಡಲಿರುವ ಬಂಡಾಯಕ್ಕೆ ತಾನೇ ನಾಯಕತ್ವ ವಹಿಸಿದನು. ಸಾಕಷ್ಟು ಪ್ರಜಾವೀರರೂ ಸೇರಿದ್ದರು. ಅಂದುಕೊಂಡ ಯೋಜನೆಯಂತೆ ಎರಡು ವಾರಗಳೊಳಗೆ ಕಮಲುದ್ದೀನ್ ಬಂಡಾಯವನ್ನು ಸಿಡಿಸಿ, ಶತ್ರುರಾಜನನ್ನು ಕೊಂದು ತನ್ನ ಸಿಂಹಾಸನವನ್ನು ದಕ್ಕಿಸಿಕೊಂಡನು. ಆಗಿನಿಂದ ಕಮಲುದ್ದೀನ್ ವಿಲಾಸ ಜೀವಿತವನ್ನು ಬಿಟ್ಟು, ಪ್ರಜಾಕ್ಷೇಮವನ್ನು ಪ್ರಧಾನವಾಗಿ ಭಾವಿಸಿ ಪರಿಪಾಲನೆ ನಡೆಸಿ, ಬಹು ಬೇಗದಲ್ಲೇ ಪ್ರಜೆಗಳ ಮನ್ನಣೆಗೆ ಪಾತ್ರನಾದನು.





# ಸಲಹೆಗಳಶಿವ

ಅನೇಕ ವರ್ಷಗಳ ಹಿಂದೆ ರಾಮಾಪುರವೆಂಬ ಊರಿನಲ್ಲಿ ವಲ್ಲಭಯ್ಯನೆಂಬ ಒಬ್ಬ ರೈತನಿದ್ದನು. ಅವನ ಒಬ್ಬನೇ ಮಗನ ಹೆಸರು ಶಿವ. ಅತ್ಯಂತ ಅಚ್ಚೆಯಿಂದ ಬೆಳೆಸಿದುದರಿಂದಲೋ ಏನೋ, ಶಿವನು ಚಿಕ್ಕಂದಿನಿಂದಲೂ ಬರೇ ಉದಾಸೀನದವ ನಾಗಿದ್ದನು. ಅತ್ತ ಓದುಬರೆಹಗಳಲ್ಲಾಗಲೀ, ಇತ್ತ ಹೊಲ ತೋಟಗಳ ಕೆಲಸಗಳಲ್ಲಾಗಲೀ ಅವನಿಗೆ ಸ್ವಲ್ಪ ಕೂಡಾ ಆಸಕ್ತಿ ಇರಲಿಲ್ಲ. ಹೊಟ್ಟೆ ತುಂಬಾ ಊಟಮಾಡಿ ಮಣ್ಣು ತಿಂದ ಹಾವಿನ ಹಾಗೆ ಮಲಗಿ ಕೊಂಡಿರುತ್ತಾನೆ. ಜನರು ಅವನನ್ನು ಸೋಮಾರಿ ಶಿವನೆಂದೇ ಹೇಳುತ್ತಿದ್ದರು. ತಾರುಣ್ಯವು ಬಂದರೂ ಅವನ ಉದಾಸೀನತೆಯಲ್ಲಿ ಯಾವುದೊಂದು ಬದಲಾವಣೆಯೂ ಬರಲಿಲ್ಲ. ಇದು ತಂದೆಯಾದ ವಲ್ಲಭಯ್ಯನಿಗೆ ತುಂಬಾ ಸಂಕಟವಾಗಿತ್ತು,

ಹೀಗಿರುವಾಗ ವಲ್ಲಭಯ್ಯನ ಪ್ರಾಣ ಸ್ನೇಹಿತ ನಾದ ದೇವಯ್ಯನಿಗೆ ದೊಡ್ಡದೊಂದು ಸಿಕ್ಕುಬಿದ್ದ ಸಮಸ್ಯೆ ಇದಿರಾಯಿತು. ಅವನ ಮಗಳಿಗೆ ಒಂದು ಸಂಬಂಧವು ನಿಶ್ಚಯವಾಗಿತ್ತು. ಬರಲಿರುವ ಅಳಿಯನಿಗೆ ಪಟ್ಟಣದಲ್ಲಿ ಉದ್ಯೋಗ. ಅವನು ವರದಕ್ಷಿಣೆಯ ರೂಪದಲ್ಲಿ ಹೊಲವನ್ನು ಕೇಳದೆ ಧನರೂಪದಲ್ಲಿಯೇ ಬೇಕೆಂದು ಕೇಳಿದನು. ಅದಕ್ಕೆ ದೇವಯ್ಯನು ಒಪ್ಪಿಯೂ ಇದ್ದನು. ಮುಹೂರ್ತದ ದಿನವೂ ನಿಶ್ಚಯವಾಗಿತ್ತು.

ಬಂಗಾರದಂತಹ ತನ್ನ ಹೊಲಗಳನ್ನು ಮಾರುವೆ ನೆಂದು ಹೇಳಿದ ಮರುಕ್ಷಣವೇ ಮಾರಿಹೋಗುವು ದೆಂಬ ನಂಬುಗೆ ದೇವಯ್ಯನಿಗೆ ಇದ್ದಿತು. ಆದುದರಿಂದ ಮದುವೆಯ ದಿನ ಹತ್ತಿರ ಬರುವವರೆಗೂ ನಿರ್ಲಕ್ಷ್ಯ ವಾಗಿದ್ದು, ಆಮೇಲೆ ಮಾರಲು ಪ್ರಯತ್ನಿಸಿದನು. ಆಗ ದೇವಯ್ಯನ ಅತ್ಯಗತ್ಯವನ್ನು ತಿಳಿದಿದ್ದವರು ಬಹಳ ಕಡಿಮೆ ಬೆಲೆಗೆ ಕೇಳಿದರು.

ದೇವಯ್ಯನು ವಲ್ಲಭಯ್ಯನ ಮನೆಗೆ ಬಂದು, ನಡೆದ ಸಮಾಚಾರವನ್ನೆಲ್ಲಾ ಹೇಳಿ, "ಮದುವೆಯ ಮುಹೂರ್ತ ಹತ್ತಿರವಾಗಿದೆ. ಏನು ಮಾಡಬೇಕೆಂದು ಗೊತ್ತಾಗದೆ ಹುಚ್ಚನ ಹಾಗಾಗಿದ್ದೇನೆ" ಎಂದನು.

ವಲ್ಲಭಯ್ಯನಿಗೆ ಏನು ಸಲಹೆ ಮಾಡಲಿಕ್ಕೂ ತೋರಲಿಲ್ಲ. ಸ್ನೇಹಿತನ ಕಷ್ಟವನ್ನು ನೋಡಿ ಬಾಯಿ ಬಿದ್ದವನ ಹಾಗೆ ಸುಮ್ಮನಿದ್ದನು. ಆಗ ಮಂಚದ ಮೇಲೆ ಉದಾಸೀನತೆಯಿಂದ ಬಿದ್ದುಕೊಂಡಿದ್ದ

ಎನ್. ಎಸ್. ನಾಗೇಶ್ವರರಾವ್



ಇದು ನಡೆದ ಮೇಲೆ ವಲ್ಲಭಯ್ಯನು ಒಂದು ದಿನ ದೇವಯ್ಯನೊಂದಿಗೆ ಅದೂ ಇದೂ ಮಾತಾಡುತ್ತಾ, "ಒಟ್ಟಿನ ಮೇಲೆ ನಮ್ಮ ಶಿವ ಯಾವುದಕ್ಕೂ ಉಪಯೋಗವಿಲ್ಲದವನಂತೆ ಬೆಳೆದು ನಿಂತನು!" ಎಂದು ತನ್ನ ಸಂಕಟವನ್ನು ಬಯಲು ಪಡಿಸಿದನು.

ಸ್ವಲ್ಪಹೊತ್ತು ಆಲೋಚಿಸುತ್ತ ದೇವಯ್ಯನು, "ಹೂಂ, ಅವನು ಉದಾಸೀನತೆಯಿಂದ ಹೀಗಾದನೇ ಹೊರತು ಇವನ ಬುದ್ಧಿ ಬಹಳ ಚುರುಕಾಗೇ ಇದೆ. ನೀವು ನೋಡುತ್ತಾ ಇರಿ. ಅವನನ್ನು ಹರಿತ ಚೂರಿಯ ಹಾಗೆ ಮಾಡುವ ಭಾರ ನನಗಿರಲಿ" ಎಂದನು.

ಆಮೇಲೆ ದೇವಯ್ಯ ಶಿವನನ್ನು ನಿದ್ದೆಯಿಂದ ಎಬ್ಬಿಸಿ, "ಎಲೋ ಶಿವಾ! ಎಲ್ಲರೂ ನಿನ್ನನ್ನು ಉದಾಸೀನದ ಮುದ್ದೆ ಎಂದು, ಯಾವ ಕೆಲಸಕ್ಕೂ ಆಗದವನೆಂದು ಸೋಮಾರಿ ಶಿವನೆಂದು ಹೇಳುತ್ತಾ ಇದ್ದರೆ ನಿನಗೆ ಕೇಳಲು ಕಷ್ಟವಾಗುವುದಿಲ್ಲವೇ?" ಎಂದು ಕೇಳಿದನು.

ಶಿವನು ಮುಚ್ಚಿಕೊಂಡು ಹೋಗುವ ಕಣ್ಣು ಗಳನ್ನು ಬಲವಂತದಿಂದ ತೆರೆಯುತ್ತ, "ಹಾಗೆ ಅವರು ಹೇಳುವುದರಲ್ಲಿ ಸುಳ್ಳು ಇಲ್ಲವಷ್ಟೆ? ನನಗೇಕೆ ಕಷ್ಟ? ನಿಜಕ್ಕೂ ನಾನು ಯಾವ ಕೆಲಸಕ್ಕೂ ಕೈಲಾಗದವನೇ" ಎಂದನು.

"ಅದೇನೋ ಅಪ್ಪ! ನನಗೆ ಮಾತ್ರ ನೀನು ದೊಡ್ಡ ಮೇಧಾವಿಯಾಗಿಯೇ ಕಾಣಿಸುವಿ. ನನ್ನ ಹೊಲದ ಮಾರಾಟದ ವಿಷಯದಲ್ಲಿ ನೀನು ಜಮೀನ್ದಾರರನ್ನು ನೋಡಲು ಹೇಳಿದಿ. ಆ ಸಲಹೆ ಬ್ರಹ್ಮಾಂಡದಷ್ಟು ಪ್ರಯೋಜನವಾಯಿತು. ಆದುದ ರಿಂದ ನೀನು ಇವತ್ತಿನಿಂದ ಸಲಹೆ ಮಾಡುವುದನ್ನೇ ಕೆಲಸವಾಗಿಟ್ಟುಕೋ. ಅದರಿಂದ ಜನರು ಲಾಭ ಪಡೆಯುತ್ತಾರೆ. ನಿನಗೂ ಅವರವರ ಶಕ್ತ್ಯಾನುಸಾರ ವಾಗಿ ಹಣ ಸಿಗುತ್ತೆ" ಎಂದನು ದೇವಯ್ಯ.

ಶಿವನು ಆಕಳಿಸಿ, "ಇದರಲ್ಲಿ ದೊಡ್ಡ ಸಿಕ್ಕು ಏನಿದೆ ಹೀಗೆ ಸುಮ್ಮನಿರಲಿಕ್ಕೆ? ನಿಮ್ಮ ಹೊಲ ಜಮೀನ್ದಾರರ ಹೊಲಕ್ಕೆ ತಾಗಿಕೊಂಡು ತಾನೇ ಇದೆ? ಅವರ ಹತ್ತಿರ ನಿಮ್ಮ ಸಂಗತಿ ಹೇಳಿದರೆ ಒಳ್ಳೆಯ ಬೆಲೆ ಕೊಟ್ಟೇ ತೆಗೆದುಕೊಳ್ಳುತ್ತಾರೆ. ದೊಡ್ಡವರು ದೊಡ್ಡತನದಿಂದಲೇ ವರ್ತಿಸುತ್ತಾರೆ" ಎಂದನು.

"ಅದು ನಿಜವೇ! ಜಮೀನ್ದಾರರನ್ನು ನೋಡ ಬೇಕೆಂಬ ಆಲೋಚನೆ ನನಗೆ ಬರಲೇ ಇಲ್ಲ" ಎಂದು ದೇವಯ್ಯನು ಗಡಿಬಿಡಿಯಿಂದ ಹೊರಟುಹೋದನು.

ಆಮೇಲೆ ದೇವಯ್ಯನ ಹೊಲವನ್ನು ಜಮೀನ್ದಾ ರರು ನ್ಯಾಯವಾದ ಬೆಲೆಗೆ ಕೊಂಡುಕೊಂಡುದೂ, ಇಟ್ಟ ಮುಹೂರ್ತದಲ್ಲಿ ದೇವಯ್ಯನ ಮಗಳ ಮದುವೆಯಾದುದೂ ಎಲ್ಲವೂ ಬೇಗ ಬೇಗನೇ ನಡೆದುಹೋಯಿತು. ದೇವಯ್ಯನು ಶಿವನಿಗೆ ಪ್ರತ್ಯೇಕವಾಗಿ ಔತಣದ ಊಟ ಮಾಡಿಸಿದನು.



ಶಿವನು ಮಂಚದಲ್ಲಿ ಮತ್ತೊಂದು ಬದಿಗೆ ಶರೀರವನ್ನು ಒತ್ತಿಕೊಂಡು, "ನೀವು ನನಗೆ ಸುಮ್ಮನೆ ಶ್ರಮ ಕೊಡುತ್ತೀರಿ. ನಾನೇನೂ ಮೇಧಾವಿಯಲ್ಲ" ಎಂದನು.

"ಅದನ್ನು ಸ್ಪಷ್ಟಪಡಿಸಬೇಕಾದವನು ನೀನಲ್ಲ. ನೀನು ಮಾತ್ರ ಕೆಲವು ದಿನಗಳವರೆಗೆ ನಾನು ಹೇಳಿದ ಹಾಗೆ ಮಾಡು" ಎಂದು ದೇವಯ್ಯ ಶಿವನನ್ನು ಮನೆಯ ಚಾವಡಿಯಲ್ಲಿ ಹಾಸಲ್ಪಟ್ಟ ಚಾಪೆಯ ಮೇಲೆ ಕೂಡಿಸಿದನು.

ಆಮೇಲೆ ದೇವಯ್ಯ ಒಂದು ಹಲಗೆಯ ಮೇಲೆ "ಇಲ್ಲಿ ಒಳ್ಳೆಯ ಸಲಹೆ ಕೊಡಲಾಗುವುದು" ಎಂದು ಸುಂದರವಾಗಿ ಬರೆದು ಶಿವನ ಪಕ್ಕದಲ್ಲಿದ್ದ ಕೋಲಿಗೆ ನೇತಾಡಿಸಿ ಕಟ್ಟಿದನು. ದೇವಯ್ಯನೂ ಅವನೊಂದಿಗೆ ಕುಳಿತನು. ದಾರಿಯಲ್ಲಿ ಹೋಗುವವರು ಅವರನ್ನು ನೋಡಿ ನಗಾಡಿಕೊಂಡರು. ಎಳೆಂಟು ದಿನಗಳಾದರೂ ಶಿವನ ಹತ್ತಿರ ಸಲಹೆ ಕೇಳಲು ಯಾರೂ ಬರಲಿಲ್ಲ.

"ಇದೆಲ್ಲಾ ಏಕೆ ಸುಮ್ಮನೆ ಇಲ್ಲದ ಪೀಕಲಾಟ? ನನ್ನನ್ನು ಹಾಯಾಗಿ ಮಲಗಲು ಬಿಡಬಾರದೆ?" ಎಂದನು ದೇವಯ್ಯನೊಂದಿಗೆ ಶಿವ.

ದೇವಯ್ಯ ಅವನ ಮಾತಿಗೆ ಮುಗುಳ್ನಗೆಯನ್ನು ತೋರಿಸುತ್ತ, "ಶಿವಾ, ಸ್ವಲ್ಪ ತಾಳ್ಮೆಯಿಂದಿರು. ನಿನ್ನ ಉದಾಸೀನವೂ ತಾಳ್ಮೆಯೂ ಹೆಚ್ಚು ಕಡಿಮೆ ಒಂದೇ. ನಾನು ಕೂಡಾ ನಿನ್ನೊಂದಿಗೇ ಕುಳಿತಿದ್ದೇನಲ್ಲಾ?" ಎಂದನು.

ಇದು ನಡೆದ ಮರುದಿನ ಬೊಬ್ಬುಳನೆಂಬ ಕುರುಬನೊಬ್ಬನು ಆ ದಾರಿಯಲ್ಲಿ ಹೋಗುತ್ತ ಅಲ್ಲಿ ನಿಂತು, ದೇವಯ್ಯನನ್ನು ನೋಡಿ, "ಏನು, ಏನು ಇದೆಲ್ಲಾ?" ಎಂದು ಕೇಳಿದನು.

"ಏನೂ ತೋರದೆ ಕಳವಳಪಡುವವರಿಗೆ ಈ ಶಿವನು ಒಳ್ಳೆಯ ಸಲಹೆಗಳನ್ನು ಹೇಳುವನು. ಸಮಸ್ಯೆಗಳನ್ನು ಪರಿಷ್ಕರಿಸುವ ಮಾರ್ಗ ತೋರಿಸುವನು. ಯಾರಿಗೆ ಏನು ತೋರಿದರೂ ಅಷ್ಟು ಕೊಟ್ಟರೆ ಸಾಕು" ಎಂದನು ದೇವಯ್ಯ.

"ಓ! ಹಾಗೆ ಹೇಳಿ ಮತ್ತೆ!" ಎಂದು ಬೊಬ್ಬುಳನು ಸಣ್ಣಗೆ ನಗುತ್ತ "ನೋಡೀ ಶಿವಯ್ಯಾ, ಊರ ಹೊರಗೆ ಪೊರಂಬೋಕು ಜಾಗದಲ್ಲಿ ಮೇವು ದೊರಕದೆ. ನಮ್ಮ ಕುರಿಗಳನ್ನು ಗುಡ್ಡದ ಪ್ರಾಂತಗಳಿಗೆ ಹೊಡೆದುಕೊಂಡು ಹೋಗುತ್ತಿದ್ದೇವೆ. ಅಲ್ಲಿ ತೋಳಗಳ ಭಯ ಜಾಸ್ತಿ. ರಾತ್ರಿಯ ಹೊತ್ತಿನಲ್ಲಿ ನಾವು ಯಾರೂ ನಿದ್ದೆಮಾಡದೆ ಕಾವಲು ಕಾಯುತ್ತಿದ್ದರೂ ಅವು ಒಂದೋ ಎರಡೋ ಕುರಿಗಳನ್ನು ಎತ್ತಿಕೊಂಡು ಹೋಗಿಬಿಡುತ್ತವೆ. ಏನು ಮಾಡಿದರೆ ಈ ಕಾಟದಿಂದ ಪಾರಾಗಬಹುದೆಂದು ಹೇಳುವಿರಾ?" ಎಂದು ಕೇಳಿದನು.

ಶಿವನು ನಿದ್ದೆಯ ಮತ್ತಿನ ಕಣ್ಣುಗಳನ್ನು ಮುಚ್ಚುತ್ತ ತೆರೆಯುತ್ತ, "ಇವತ್ತಿನಿಂದ ರಾತ್ರಿಯ



ಹೊತ್ತಿನಲ್ಲಿ ನಿಮ್ಮಲ್ಲಿ ಒಬ್ಬನನ್ನು ಯಾವ ಮರದ ಮೇಲೆಯೋ ಇದ್ದು ಬಡಬಡನೆ ಡಕ್ಕೆ ಬಾರಿಸಿ ಕೊಂಡಿರಲು ಹೇಳಿರಿ. ಆ ಶಬ್ದ ಕೇಳಿ ತೋಳಗಳು ನಿಮ್ಮ ಕುರಿಗಳ ಕಡೆಗೆ ಬಾರವು. ಉಳಿದವರು ಹಾಯಾಗಿ ನಿದ್ದೆ ಮಾಡಬಹುದು. ಸರದಿ ಪ್ರಕಾರ ಡಕ್ಕೆ ಬಾರಿಸಿದರಾಯಿತು" ಎಂದು ಸಲಹೆ ಹೇಳಿದನು.

"ಆಹಾ! ಎಷ್ಟು ಒಳ್ಳೆಯ ಸಲಹೆ! ನಮ್ಮ ಗೆರಟೇ ಮಂಡೆಗೆ ಈ ಆಲೋಚನೆ ತಟ್ಟಲೇ ಇಲ್ಲ" ಎಂದು ಬೊಬ್ಬಳನು ಕೈಯಲ್ಲಿದ್ದ ಕಾಲು ರೂಪಾಯಿಯನ್ನು ಶಿವನ ಕೈಗೆ ಕೊಟ್ಟು ಹೊರಟುಹೋದನು.

ಶಿವನ ಸಲಹೆಯಿಂದ ಕುರುಬರಿಗೆ ತೋಳದ ಕಾಟ ತಪ್ಪಿತೆಂದು ತಿಳಿದು, ಊರಲ್ಲಿದ್ದವರು ಸಲಹೆಗಾಗಿ ಶಿವನ ಬಳಿಗೆ ಬರತೊಡಗಿದರು. ಕ್ರಮವಾಗಿ ಅವನ ಸಂಪಾದನೆ ಬೆಳೆಯುತೊಡಗಿತು.

ಸೋಮಾರಿ ಶಿವನ ಸಮಾಚಾರವು ಪಕ್ಕದ ಊರಿನ ಜಮೀನ್ದಾರರಿಗೆ ತಿಳಿಯಿತು. ಅವರು ಶಿವನಿಗೆ ಸುದ್ದಿ ಕಳುಹಿಸಿ, ಅವನನ್ನು ತಮ್ಮ ಬಳಿಗೆ ಕರೆಯಿಸಿ, "ನೀನು ಸಲಹೆ ಮಾಡುವುದರಲ್ಲಿ ಬಹಳ ಗಟ್ಟಿಗನೆಂದು ತಿಳಿಯಿತು. ನನಗೆ ಒಂದು ಸಮಸ್ಯೆ ಕೊರೆಯುತ್ತಾ ಇದೆ. ನನ್ನ ಅಳಿಯ ಮದ್ಯಪಾನಕ್ಕೆ ದಾಸನಾಗಿ ಹೋಗಿದ್ದಾನೆ. ಅವನ ಆ ದುರಭ್ಯಾಸವನ್ನು ಬಿಡಿಸಲು ನನ್ನಿಂದಾಗದೆಹೋಯಿತು. ನೀನೇನಾದರೂ ಸಲಹೆ ಹೇಳುವಿಯಾ?" ಎಂದು ಕೇಳಿದರು.

"ಅಯ್ಯಾ, ನೀವು ಒಂದು ಕೆಲಸ ಮಾಡಿಬಿಡಿ. ಯಾವ ವೈದ್ಯನ ಕೈಯಿಂದಾದರೂ ವಾಂತಿಯಾಗುವ ಮದ್ದನ್ನು ತಂದು ಅದನ್ನು ನಿಮ್ಮ ಅಳಿಯ ಕುಡಿಯುವ ಮದ್ಯದಲ್ಲಿ ರಹಸ್ಯವಾಗಿ ಬೆರೆಸಿಬಿಡಿ. ಅವರು ವಾಂತಿಮಾಡಿ ಬೋದ ತಪ್ಪುತ್ತಾರೆ. ಆಗ ನೀವು ಗಾಬರಿಯ ಗಡಿಬಿಡಿ ತೋರಿಸಿ, ವೈದ್ಯನನ್ನು ಕರೆಯಿಸಿ, ಅವನಿಂದ ವಾಂತಿ ನಿಲ್ಲಿಸುವ ಮದ್ದು ಕೊಡಿಸಿರಿ. ಅನಂತರ ವೈದ್ಯನಿಂದಲೇ ನಿಮ್ಮ ಅಳಿಯನಿಗೆ ಕಲಬೆರಕೆಯ ಮದ್ಯದಿಂದ ಹೀಗಾಯಿತೆಂದು, ಅದಕ್ಕೆ ಪ್ರತೀಕಾರದ ಮದ್ದು ಕೊಡಲು ಸ್ವಲ್ಪ ತಡವಾಗಿದ್ದರೆ ಪ್ರಾಣಾಪಾಯ ಬರುತ್ತಿತ್ತೆಂದು ಹೇಳಿಸಿರಿ. ಆಮೇಲೆ ನಿಮ್ಮ ಅಳಿಯ ಮದ್ಯದ ಕಡೆಗೆ ತಲೆ ತಿರುಗಿಸಲಾರರು" ಎಂದು ಶಿವನು ಸಲಹೆ ಮಾಡಿದನು.

ಆ ದಿನ ರಾತ್ರಿಯೇ ಜಮೀನ್ದಾರರು ಶಿವನ ಸಲಹೆಯನ್ನು ಅಮಲುಗೊಳಿಸಿದರು. ನಾಟಕವು ಚೆನ್ನಾಗಿಯೇ ನಡೆಯಿತು. ಮರುದಿನದಿಂದ ಜಮೀನ್ದಾರರ ಅಳಿಯ ಪ್ರಾಣದ ಮೇಲಿನ ಮಮತೆಯಿಂದ ಮದ್ಯವನ್ನು ವಿಷಕ್ಕೆ ಸಮಾನವೆಂದೇ ತಿಳಿಯತೊಡಗಿದನು. ಜಮೀನ್ದಾರರು ಶಿವನನ್ನು ಮೆಚ್ಚಿಕೊಂಡು ನೂರು ವರಹಗಳನ್ನು ಬಹುಮಾನವಾಗಿ ಕೊಟ್ಟರು.

ಈ ಸಂಗತಿ ನಡೆದು ಒಂದು ತಿಂಗಳಾಗುವಷ್ಟರಲ್ಲಿ ಆ ದೇಶದ ರಾಜನಾದ ಮಹೇಂದ್ರಪಾಲನ

ಮೇಲೆ ನೆರೆಯ ರಾಜನಾದ ವಿಕ್ರಮವರ್ಮನು ಯುದ್ಧವನ್ನು ಪ್ರಕಟಿಸಿದನು. ಆ ಸಮಯದಲ್ಲಿ ಮಹೇಂದ್ರಪಾಲ ರಾಜನು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದನು. ಇದನ್ನು ತಿಳಿದೇ ವಿಕ್ರಮವರ್ಮನು ಮುಂಗಾಲು ಕೆದರಿ ಯುದ್ಧಕ್ಕೆ ಬರುವಂತಾಯಿತು.

ಮಹೇಂದ್ರಪಾಲನಿಗೆ ಜಮೀನ್ದಾರರು. ಒಳ್ಳೆಯ ಆಶ್ರಿತರಾಗಿದ್ದರು. ಅವರು ರಾಜನನ್ನು ನೋಡಿ, ಶಿವನ ಸಲಹೆಯಿಂದ ತಾನು ಹೇಗೆ ಪ್ರಯೋಜನ ಪಡೆದೆನೆಂಬುದನ್ನು ಹೇಳಿ, ಅವನನ್ನು ಕರೆಯಿಸಿ ಈ ಸಮಸ್ಯೆಯಿಂದ ಪಾರಾಗಲು ಸಲಹೆ ಕೇಳಬಹುದೆಂದು ಹೇಳಿದರು.

ಮಹೇಂದ್ರಪಾಲ ರಾಜನು ಶಿವನನ್ನು ತನ್ನ ಬಳಿಗೆ ಬರಮಾಡಿಸಿ, ಸಂಗತಿಯನ್ನೆಲ್ಲಾ ವಿವರಿಸಿ ಹೇಳಿದನು. ಅದನ್ನು ಕೇಳಿ ಶಿವನು ರಾಜನೊಂದಿಗೆ, "ಪ್ರಭುಗಳೇ, ನಿಮ್ಮ ಅನಾರೋಗ್ಯವು ಕೇವಲ ಕಪಟ ನಾಟಕವೇ ಎಂದು ಪುಕಾರು ಹುಟ್ಟಿಸಿಬಿಡಿರಿ. ನಿಮ್ಮಷ್ಟಕ್ಕೆ ನೀವು ವಿಕ್ರಮವರ್ಮನ ಮೇಲೆ ಯುದ್ಧಕ್ಕೆ ಹೋಗದೆ, ಅವನು ನಿಮ್ಮ ಮೇಲೆ ದಂಡೆತ್ತಿ ಬರುವ ಹಾಗೆ ಮಾಡಿ, ಸೋಲಿಸಬೇಕೆಂಬ ವ್ಯೂಹದಿಂದ ಹೀಗೆ ಅನಾರೋಗ್ಯದಿಂದ ನಟಿಸುತ್ತಿರುವಂತೆ ಅವನಿಗೆ ತಿಳಿಯುವ ಹಾಗೆ ಮಾಡಿರಿ. ಇದಕ್ಕಾಗಿ ನೀವು ದಿನಾ ಅಂತಃಪುರದೊಳಗೆ ನೃತ್ಯಗಾನ ವಿಲಾಸದೊಳಗೆ ಮುಳುಗಿ ತೇಲುತ್ತಿರುವಂತೆ ವಾರ್ತೆಗಳನ್ನು ಪ್ರಚಾರಪಡಿಸಿರಿ. ಆದರೆ ಯುದ್ಧಕ್ಕೆ ಮಾತ್ರ ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಂಡೇ ಇರಬೇಕು. ತನ್ನ ಗೂಢಚಾರರ ಮೂಲಕ ಈ ಸಂಗತಿಯನ್ನು ಕೇಳಿದ ವಿಕ್ರಮವರ್ಮನು ದೇಶದ ಸರಿಹದ್ದನ್ನು ದಾಟಿ ಮುಂದೆ ಬರುವ ಪ್ರಯತ್ನವನ್ನು ಬಿಟ್ಟು ಹಿಂದಿರುಗಿ ಹೋಗಿ ಬಿಡುತ್ತಾನೆ" ಎಂದು ಸಲಹೆ ಮಾಡಿದನು.

ರಾಜನು ಶಿವನು ಹೇಳಿದಂತೆಯೇ ಎಲ್ಲವನ್ನೂ ಮಾಡಿಸಿದನು. ಒಂದು ವಾರ ಕಳೆಯುವಷ್ಟರಲ್ಲಿ ಗೂಢಚಾರರ ಮೂಲಕ ಸಂಗತಿಯನ್ನು ತಿಳಿದ ವಿಕ್ರಮವರ್ಮನು, ಯುದ್ಧ ಮಾಡಬೇಕೆಂಬ ಆಲೋಚನೆಯನ್ನು ಬಿಟ್ಟು, ಸರಿಹದ್ದಿನಲ್ಲಿ ಹಾಕಿಸಿದ ಶಿಬಿರಗಳನ್ನೆತ್ತಿಸಿ, ತನ್ನ ರಾಜಧಾನಿಗೆ ಹಿಂದಿರುಗಿ ಹೋಗಿಬಿಟ್ಟನು.

ಮಹೇಂದ್ರಪಾಲ ರಾಜನು ಇದನ್ನು ಕೇಳಿ ಪರಮಾನಂದಗೊಂಡು ಶಿವನನ್ನು ದೊಡ್ಡ ಸಂಬಳದ ಮೇಲೆ ತನ್ನ ಅಂತರಂಗಿಕ ಸಲಹಾದಾರನನ್ನಾಗಿ ನಿಯಮಿಸಿಕೊಂಡನು.

ಅಂದಿನಿಂದ ಶಿವನ ಹೆಸರು "ಸಲಹೆಗಳ ಶಿವ" ಎಂದು ಸ್ಥಿರವಾಗಿಹೋಯಿತು.





# ಬಂಧವಿಮುಕ್ತಿ

ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ಮಾಂತ್ರಿಕ, ಬಹುದೊಡ್ಡ ಮಾಂತ್ರಿಕ; ಆದರೆ ಬಹಳ ಮುದುಕ. ಅವನು ಆ ಊರಿನ ಒಂದು ಸಂದಿನಲ್ಲಿ ಚಿಕ್ಕದೊಂದು ಅಂಗಡಿ ಇಟ್ಟುಕೊಂಡು ಏನೇನೋ ವಸ್ತುಗಳನ್ನು ಮಾರುತ್ತ ಕಾಲಕ್ಷೇಪ ಮಾಡಿಕೊಂಡಿದ್ದನು. ಅವನೊಬ್ಬ ಮಾಂತ್ರಿಕನೆಂಬ ಸಂಗತಿ ಒಬ್ಬ ಹುಡುಗನ ಹೊರತು ಬೇರೆ ಯಾರಿಗೂ ತಿಳಿಯದು.

ಆ ಹುಡುಗನಿಗೆ ತಾಯಿ ಇರಲಿಲ್ಲ. ತಂದೆ ಮಾತ್ರ ಯಾವುದೋ ಒಂದು ಕೆಲಸಕ್ಕೆ ಹೋಗುತ್ತಿದ್ದನು. ಆದುದರಿಂದ ಆ ಹುಡುಗನು ಏನೂ ತೋರದೆ ಮಾಂತ್ರಿಕನ ಅಂಗಡಿಯನ್ನು ನೋಡಿಕೊಳ್ಳುತ್ತ, ಬರುವ ಗಿರಾಕಿಗಳಿಗೆ ವಸ್ತುಗಳನ್ನು ತೆಗೆದು ತೋರಿಸುತ್ತಿದ್ದನು.

ಒಂದು ವಸ್ತುವನ್ನು ಮಾತ್ರ ಮಾರಲೇ ಬಾರದೆಂದು ಮಾಂತ್ರಿಕನು ಹೇಳಿದ್ದನು. ಅದೊಂದು ವಿಚಿತ್ರವಾದ ತಂಬೂರಿ. ಅಂಗಡಿಗೆ ಬಂದ ಪ್ರತಿಯೊಬ್ಬರೂ "ಆ ತಂಬೂರಿಯ ಬೆಲೆ ಎಷ್ಟು ?" ಎಂದು ಕೇಳುವರು. "ಇದು ಮಾರಲಿಕ್ಕೆ ಅಲ್ಲವಯ್ಯಾ" ಎಂದು ಉತ್ತರ ಕೊಡುವನು ಮಾಂತ್ರಿಕ. ಲಕ್ಷ ರೂಪಾಯಿ ಕೊಡುವೆನೆಂದರೂ ಸರಿಯೆ, ಆ ತಂಬೂರಿಯನ್ನು ಮಾತ್ರ ಹುಡುಗನ ಹೊರತು ಬೇರೆ ಯಾರಿಗೂ ಮುಟ್ಟಲು ಬಿಡುತ್ತಿಲ್ಲ ಮುದಿ ಮಾಂತ್ರಿಕ.

ಒಂದು ದಿನ ಹುಡುಗನು, "ತಾತಾ, ತಾತಾ, ಕೇಳಿದಷ್ಟು ಹಣ ಬರುತ್ತದಪ್ಪೆ ? ತಂಬೂರೀನ ಮಾರಿಬಿಡಬಾರದೆ ?" ಎಂದು ಕೇಳಿದನು.

"ನೀನು ಬೆಳೆದು ದೊಡ್ಡವನಾದ ಮೇಲೆ ಅದನ್ನು ನಿನಗೆ ಕೊಟ್ಟು ಬಿಡುತ್ತೇನೆ. ಅದು ಅಮರ ಗಾನವನ್ನೇ ಹಾಡುವಂಥಾದ್ದು. ಆ ಹಾಡಿಗೆ ಎಲ್ಲಾ ಜನರೂ ನಿಶ್ಚೇಷ್ಟಿತರಾಗಿ ನಿನ್ನ ಕಡೆಗೇ ತಿರುಗಿ ಕೇಳುತ್ತಾ ಇರುತ್ತಾರೆ" ಎಂದು ಮಾಂತ್ರಿಕನು ತಂಬೂರಿಯನ್ನು ಕೈಯಲ್ಲಿ ಎತ್ತಿ, ಅದರ ತಂತಿಗಳನ್ನು ಮೀಟಿ ಹಾಡಿದ ಕೂಡಲೇ ದಿವ್ಯಗಾನವು ಅದರೊಳಗಿನಿಂದ ಪ್ರತ್ಯೇಕವಾಗಿ ಬರುವಂತೆ ಅದ್ಭುತವಾಗಿ ಹೊರಟಿತು.

ಇಂತಹ ಮಧುರಗಾನವು ಹೇಗೆ ಹೊರಡುತ್ತದೆಂದು ಕೇಳುವವರಿಗೆಲ್ಲಾ ಒಂದೇ ಆಶ್ಚರ್ಯ. ಆ



ತಂಬೂರಿಯೊಳಗೆ ಮಾಂತ್ರಿಕನು ಒಬ್ಬಳು ದೇವಕನ್ಯೆಯನ್ನು ಬಂಧಿಸಿಟ್ಟಿದ್ದನು. ಅವಳನ್ನು ಹಾಗೆ ಬಂಧಿಸಿ ಬಹಳ ಕಾಲವಾಗಿತ್ತು. ಆ ಗುಟ್ಟು ಮಾಂತ್ರಿಕನ ಹೊರತು ಬೇರೆ ಯಾರಿಗೂ ತಿಳಿಯದು.

ಆಗಿನಿಂದಲೂ ಮಾಂತ್ರಿಕನಿಗೆ ಹೆದರಿ ಆ ದೇವಕನ್ಯೆ ಅವನಿಗೆ ಬೇಕಾದಾಗಲೆಲ್ಲಾ ಅವನ ಹಾಡಿನೊಂದಿಗೆ ಹಾಡುತ್ತಿದ್ದಳು. ಆ ದೇವಕನ್ಯೆಗೆ ಈ ಹುಡುಗನೆಂದರೆ ಅತ್ಯಂತ ಪ್ರೇಮ. ಆದುದರಿಂದ ಅವನು ತಂಬೂರಿಯನ್ನು ಎತ್ತಿಕೊಂಡಾಗಲೆಲ್ಲಾ ಅದ್ಭುತವಾದ ದಿವ್ಯಗಾನವನ್ನು ಹಾಡುವಳು. ದೇವಕನ್ಯೆಯಿಂದ ಹೊರಡುವ ಗಾನದಿಂದ ಹುಡುಗನ ಕಣ್ಣುಗಳಲ್ಲಿ ಆನಂದಭಾಷ್ಪ ತುಂಬುತ್ತಿದ್ದಿತು.

ಹೀಗಿರುವಾಗ ಆ ಹುಡುಗನ ಹುಟ್ಟು ಹಬ್ಬದ ದಿನವು ಬಂದಿತು. ಆ ದಿನ ಅವನು ಬಂದು ಮಾಂತ್ರಿಕನಿಗೆ ನಮಸ್ಕರಿಸಿದ ಕೂಡಲೇ, ಮಾಂತ್ರಿಕನು ಹರಸುತ್ತ "ಮೊಮ್ಮಗನೇ, ನಾನು ನಿನಗೆ ಕೊಡುವೆನೆಂದ ತಂಬೂರಿ ಇಗೋ! ಇದನ್ನು ನಿನ್ನ ಇಷ್ಟ ಬಂದ ಹಾಗೆ ಉಪಯೋಗಿಸಿಕೋ!" ಎಂದು ಹೇಳಿ ಅದನ್ನು ಬಹುಮಾನವಾಗಿ ಕೊಟ್ಟನು.

ಅದಕ್ಕೆ ಹುಡುಗನು ಸಂತೋಷದಿಂದ ಉಬ್ಬುತ್ತ, "ನನ್ನ ಸ್ವಂತಕ್ಕೆ ಕೊಟ್ಟುಬಿಟ್ಟಿರಾ ತಾತಾ? ನನ್ನ ಇಷ್ಟಬಂದ ಹಾಗೆ ಮಾಡಿಕೊಳ್ಳಬಹುದಾ?" ಎಂದು ಮತ್ತೆ ಮತ್ತೆ ಕೇಳಿದನು.

"ಮಾಡಿಕೋ ಮೊಮ್ಮಗಾ, ಮಾಡಿಕೋ! ಅದಕ್ಕೆ ಅಭ್ಯಂತರವೇನಿದೆ?" ಎಂದನು ನಗುತ್ತಾ ಮಾಂತ್ರಿಕ ತಾತ.

ಕೂಡಲೇ ಹುಡುಗನು ತಂಬೂರಿಯನ್ನು ಕೈಯಲ್ಲಿ ಹಿಡಿದು ಹೆಗಲಿಗೆ ಒರಗಿಸಿ ತಂತಿಗಳನ್ನು ಮೀಟಿ ಶ್ರುತಿ ಎಬ್ಬಿಸಿದನು. ಆಗ ತಂಬೂರಿಯೊಳಗಿನಿಂದ, "ಅಪ್ಪಾ, ನನ್ನ ಮಗನೇ! ನನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡಪ್ಪಾ. ನನಗೆ ಇಷ್ಟವಾದ ಅರಣ್ಯಕ್ಕೆ ಹೋಗಲು ಬಿಡು. ನನ್ನ ಲೋಕಕ್ಕೆ ನಾನು ಹೋಗಲು ಸ್ವತಂತ್ರ ಕೊಡಪ್ಪಾ!" ಎಂದು ಕನಿಕರ ಹುಟ್ಟುವಂತೆ ದೀನ ಸ್ವರದಿಂದ ರಾಗವಾಗಿ ದೇವಕನ್ಯೆ ಹಾಡಿದಳು.

ಹುಡುಗನು ಅರ್ಧದಲ್ಲಿ ತಂಬೂರಿಯನ್ನು ಕೆಳಗಿಳಿಸಿ, ಗಿರಕ್ಕನೆ ಮಾಂತ್ರಿಕನ ಕಡೆಗೆ ತಿರುಗಿದನು. "ತಾತಾ, ಈ ತಂಬೂರಿಯನ್ನು ನಿಜಕ್ಕೂ ನನ್ನದಾಗಿಯೇ ಕೊಟ್ಟಿರಾ? ದೇವಕನ್ಯೆಯನ್ನು ಬಂಧನದಿಂದ ಬಿಡುಗಡೆ ಮಾಡಬಹುದೇ?" ಎಂದು ಆತುರದಿಂದ ಕೇಳಿದನು.

"ತಂಬೂರಿಯೊಳಗೆ ದೇವಕನ್ಯೆ ಇರುವಳೆಂದು ನಿನಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದನು ಷುದಿ ಮಾಂತ್ರಿಕ.

ಅದಕ್ಕೆ ಹುಡುಗನು, "ದೇವಕನ್ಯೆಯ ಮಾತು ನನಗೆ ಅನೇಕಸಾರಿ ಕೇಳಿಸಿರುತ್ತದೆ. ಈ ಬಂಧನದಿಂದ ಬಿಡುಗಡೆ ಮಾಡುವಂತೆ ಎಷ್ಟೋಸಾರಿ ಕೇಳಿ

ಕೊಂಡಿದ್ದಾಳೆ. ಈಗ ಹಾಡುವ ಹಾಡಿನಲ್ಲಿ ಕೂಡಾ ಹಾಗೆಯೇ ಕೇಳುತ್ತಾಳೆ. ಅವಳ ಸಂಕಟವನ್ನು ಸಹಿಸಲು ಇನ್ನು ನನಗಾಗುವುದಿಲ್ಲ. ಈ ತಂಬೂರಿ ನಿಜಕ್ಕೂ ನನ್ನದೇ ಆದರೆ ಈಗಲೇ ಅವಳನ್ನು ಬಿಡುಗಡೆ ಮಾಡಿ ಬಿಡುತ್ತೇನೆ" ಎಂದು ತನ್ನ ಹೃದಯದೊಳಗಿನ ಆವೇದನೆಯನ್ನು ಹೊರಪಡಿಸಿ ಕೊಂಡು ಹೇಳಿದನು.

"ಅವಳನ್ನು ಬಿಟ್ಟು ಬಿಟ್ಟರೆ ತಂಬೂರಿಯಿಂದ ದಿವ್ಯಗಾನವನ್ನು ಹೊರಡಿಸಲು ಸಾಧ್ಯವಾಗದು. ಅವಳು ಅದರೊಳಗೆ ಇರುವಾಗ ಮಾತ್ರವೇ ನೀನು ಹೇಳುವ ಹಾಡು ದಿವ್ಯವಾಗಿ ಕೇಳಿಸುತ್ತದೆ. ಹಾಗೆ ಬರುವ ಗಾನಕ್ಕೆ ತನ್ಮಯತೆ ಇರುತ್ತದೆ. ಲೋಕವೆಲ್ಲಾ ನಿನ್ನ ಪಾದದ ಬುಡದಲ್ಲಿರುತ್ತದೆ. ಅವಳನ್ನು ತಂಬೂರಿಯೊಳಗಿನಿಂದ ಬಿಟ್ಟರೂ, ನೀನು ತಂಬೂರಿ ಬಾರಿಸಿ ಹಾಡಬಹುದು. ಆ ಹಾಡು ಭಿಕ್ಷುಕರು ಹಾಡುವ ಹಾಗೆಯೇ ಇರುತ್ತದೆ. ದಿವ್ಯಗಾನವಾದರೆ ಕೀರ್ತಿಯೂ, ಐಶ್ವರ್ಯವೂ ಎಲ್ಲವೂ ಬರುತ್ತದೆ. ಇಲ್ಲದಿದ್ದರೆ ದಾರಿದ್ರ್ಯದಲ್ಲೇ ಒದರಾಡಿಕೊಂಡಿರುತ್ತೀ. ಯಾವ ಮಾರ್ಗ ಬೇಕೋ ನೋಡಿಕೋ" ಎಂದನು ಮುದಿ ಮಾಂತ್ರಿಕ.

ಅದಕ್ಕೆ ಹುಡುಗನು "ತಾತಾ, ಅದೇನಾದರೂ ಆಗಲಿ, ಚಿಂತೆಯಿಲ್ಲ. ದೇವಕನ್ಯೆಯನ್ನು ನಾನು ಬಂಧಿಸಿಡಲಾರೆ" ಎಂದು ಹೇಳಿ ತಂಬೂರಿಯನ್ನೆತ್ತಿ ನೆಲದ ಮೇಲೆ ಅಪ್ಪಳಿಸಿದ ಹಾಗೆ ಹಾಕಿದನು.

ತಂಬೂರಿ ತುಂಡು ತುಂಡಾಯಿತು. ಅದರೊಳಗಿನಿಂದ ಒಬ್ಬಳು ದೇವಕನ್ಯೆ ಹಾರಿ ಹೊರಗೆ ಬಂದಳು.

"ಅಪ್ಪಾ, ನೀನು ಒಳ್ಳೆಯ ಹೃದಯ ಉಳ್ಳವನು. ನನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡಿದೆ. ಈ ತಂಬೂರಿಯೊಳಗೆ ಇನ್ನು ನಾನಿಲ್ಲ. ಆದುದರಿಂದ ಇಷ್ಟರ ವರೆಗೆ ನನ್ನ ಮಹಿಮೆಯಿಂದ ನೀನು ಮಾಡುತ್ತಾ ಬಂದ ದಿವ್ಯಗಾನವು ಇನ್ನು ಮೇಲೆ ಇರುವುದಿಲ್ಲ. ಆದರೆ ನಾನು ಆಗಾಗ ನಿನ್ನ ಹತ್ತಿರ ಬಂದು ದಿವ್ಯಗಾನ ಮಾಡುತ್ತಾ ಇರುತ್ತೇನೆ. ಅದನ್ನು ನೀನು ಬರೆದುಕೊಂಡು ಗ್ರಂಥಸ್ಥ ಮಾಡಿ ಲೋಕದವರ ಮುಂದೆ ಹಾಡು. ನಿನಗೆ ದೊಡ್ಡ ಕೀರ್ತಿ ಬರುತ್ತದೆ" ಎಂದು ಹೇಳಿ ಅದೃಶ್ಯಳಾಗಿ ಹೋದಳು.

ಮಾಂತ್ರಿಕನು ಮುಗುಳು ನಗುತ್ತ, ಒಡೆದು ಹೋದ ತಂಬೂರಿಯ ತುಂಡುಗಳನ್ನು ಹೆಕ್ಕಿ ಸೇರಿಸಿ ಅಂಟಿಸಿ ಮೊದಲಿನಂತೆ ಮಾಡಿ ಅದನ್ನು ಹುಡುಗನಿಗೆ ಕೊಟ್ಟನು.

"ಮೊಮ್ಮಗನೇ ! ನಿನ್ನ ತ್ಯಾಗಕ್ಕೂ, ಸಾಹಸಕ್ಕೂ ಇಕೋ ತಂಬೂರಿ. ತೆಗೆದುಕೋ. ಸುಖವಾಗಿರು" ಎಂದು ಅದನ್ನು ಅವನ ಕೈಗೆ ಕೊಟ್ಟು ಮಾಯವಾಗಿ ಹೋದನು ಆ ಮುದಿ ಮಾಂತ್ರಿಕ.





# ಶಿವಪುರಾಣ

ಪಾರ್ವತಿ ಮಹಾವಿಷ್ಣುವಿನ ಬಳಿಗೆ ಹೋಗಿ, "ಅಣ್ಣಾ, ನನಗೆ ದೊಡ್ಡ ಆಪತ್ತು ಬಂದಿದೆ. ನನ್ನ ಗಂಡನನ್ನು ಗಜಾಸುರನು ತನ್ನ ಹೃದಯದಲ್ಲಿ ಹುದುಗಿಸಿದ್ದಾನೆ. ಲಿಂಗರೂಪದಲ್ಲಿ ಅವನ ಹೃದಯ ದಲ್ಲಿದ್ದಾನೆ ನನ್ನ ಗಂಡ. ನೀನೇ ಆತನನ್ನು ಕೈಲಾಸಕ್ಕೆ ತಂದು ಸೇರಿಸಬೇಕು. ಬೇರೆ ಯಾರೊಡನೆ ಹೇಳಿ ಕೊಳ್ಳಲಿ ? " ಎಂದು ಪ್ರಾರ್ಥಿಸಿದಳು.

ವಿಷ್ಣು ಅವಳಿಗೆ ಹಾಗೆಯೇ ಮಾಡುವೆನೆಂದು ಭರವಸೆ ಕೊಟ್ಟನು. ಶಿವನು ಕೈಲಾಸಕ್ಕೆ ತಿರುಗಿ ಬರುವವರೆಗೆ, ಗಣಪತಿಗಳಲ್ಲಿ ಹಿರಿಯನಾದವನು ಕೈಲಾಸವನ್ನೂ ಪಾರ್ವತಿಯನ್ನೂ ಸಂರಕ್ಷಿಸುವಂತೆ ಏರ್ಪಡಿಸಿದನು ಮಹಾವಿಷ್ಣು.

ಆಮೇಲೆ ವಿಷ್ಣು ರುದ್ರ, ವೀರಭದ್ರ ಗಣ ಗಳೊಂದಿಗೆ ಬ್ರಹ್ಮನ ಬಳಿಗೆ ಹೋದನು. ಮಹಾ ವಿಷ್ಣು ತಲೆಹಾಕಿದ ಈ ಘನಕಾರ್ಯದ ಸಂಗತಿ ದೇವೇಂದ್ರಾದಿ ದೇವತೆಗಳಿಗೂ ಗೊತ್ತಾಗಿ ಅವರೂ ಉತ್ಸಾಹದಿಂದ ಬಂದರು.

ತರುವಾಯ ಎಲ್ಲರೂ ಮಹಾವಿಷ್ಣುವಿನ ಆದೇಶ ದಂತೆ ರೂಪಪಲ್ಲಟ ಮಾಡಿಕೊಂಡು ರುದ್ರ ಗಣ ಗಳೊಂದಿಗೆ ಕೂಡಿ ಶೋಣಿತಪುರಕ್ಕೆ ಹೋದರು. ನಂದೀಶ್ವರನು ಗಂಗೆತ್ತಾಗಿ ಮಾರ್ಪಟ್ಟನು. ಉಳಿ ದವರು ಬಗೆಬಗೆಯ ವಾದ್ಯಗಳನ್ನು ಬಾರಿಸುವವರ ವೇಷದಲ್ಲಿದ್ದರು. ವಿಷ್ಣು ಗಂಗೆತ್ತನ್ನು ಆಡಿಸುವವ ನಾಗಿ ಮಾರ್ಪಟ್ಟನು. ಅವರೆಲ್ಲರೂ ಶೋಣಿತಪುರದ ಬೀದಿಗಳಲ್ಲಿ ತಿರುಗುತ್ತ ಗಂಗೆತ್ತನ್ನು ಆಡಿಸುತ್ತ ಶಿವಸ್ತೋತ್ರ ಮಾಡುತ್ತ ಎಲ್ಲರನ್ನೂ ಆನಂದಪಡಿಸಿ ಕೊಂಡಿದ್ದರು. ಜನರು ಉತ್ಸವಕ್ಕೆ ಬರುವಂತೆ ಅವರ ಆಟ ನೋಡಲು ಬರುತ್ತಿದ್ದರು.

ಒಂದು ಅದ್ಭುತವಾದ ಗಂಗೆತ್ತು ಬಂದು ಮನುಷ್ಯರು ಮಾಡುವ ಹಾಗೆ ಮಾಡುತ್ತದೆಂದೂ, ಹೇಳಿದ ಹಾಗೆ ಕುಣಿಯುತ್ತದೆಂದೂ ಕೇಳಿ, ಆ ಗಂಗೆತ್ತಿನ ಗುಂಪಿನವರನ್ನು ಗಜಾಸುರನು ತನ್ನ ಸಭೆಗೆ ಬರಮಾಡಿಸಿದನು. ಅಲ್ಲಿ ಗಂಗೆತ್ತು ಹಾಡಿಗೆ ತಕ್ಕ ಹಾಗೆ ನೃತ್ಯ ಮಾಡಿತು.

## ೯. ಗಜಾಸುರನ ಮರಣ



ಅವರು ಹಾಡುವ ಹಾಡೆಲ್ಲವೂ ಶಿವಸ್ತೋತ್ರಗಳಾಗಿದ್ದುವು. ಆ ಸ್ತೋತ್ರಗಳನ್ನು ಕೇಳುತ್ತಿದ್ದಂತೆ ಗಜಾಸುರನ ಹೃದಯದಲ್ಲಿದ್ದ ಶಿವಲಿಂಗವು ಮೆಲ್ಲನೆ ಉಬ್ಬುತ್ತ ದೊಡ್ಡದಾಗತೊಡಗಿತು.

ಲಿಂಗವು ದೊಡ್ಡದಾಗುತ್ತಿದ್ದಂತೆ ಗಜಾಸುರನ ಶ್ವಾಸನಾಳಕ್ಕೆ ಒತ್ತಡ ಬಂದು, ಅವನಿಗೆ ಉಸಿರಾಡಲಾಗಲಿಲ್ಲ. ಅವನು ತನಗೆ ಸಾಯುವ ಕಾಲ ಬಂತೆಂದು ತಿಳಿದು "ಹೇ! ಪರಮೇಶ್ವರಾ! ಕಾಪಾಡು! ನಿನ್ನಿಂದಲೇ ಸಾಯುತ್ತಿದ್ದೇನೆ" ಎಂದು ಕೂಗಿದನು.

"ಗಜಾ! ಈಗ ನಿನಗೆ ಸಾವು ಸಮೀಪಿಸಿತು. ಅದಕ್ಕಾಗಿ ಚಿಂತಿಸಬೇಡ. ಬೇಕಾದ ವರವನ್ನು ಕೇಳು" ಎಂದನು ಶಿವ.

"ನನ್ನ ತಲೆ ಪೂಜನೀಯವಾಗಿರುವಂತೆ ಮಾಡು. ನನ್ನ ಚರ್ಮವನ್ನು ನೀನು ಧರಿಸಬೇಕು. ನನಗೆ ಜನ್ಮರಾಹಿತ್ಯವು ಸಿಗಬೇಕು. ಈ ಮೂರು ವರಗಳನ್ನು ನನಗೆ ಕೊಡು ದೇವಾ!" ಎಂದು ಆರ್ತನಾಗಿ ಬೇಡಿಕೊಂಡನು ಗಜಾಸುರ.

ಶಿವನು ಅವನು ಕೇಳಿದ ವರಗಳನ್ನು ಕೊಟ್ಟನು. ಅವನು ಇಲಿಯ ರೂಪದಲ್ಲಿ ತನ್ನ ಹತ್ತಿರವೇ ಇರುವಂತೆ ಅನುಗ್ರಹಿಸಿ, ಗಜಾಸುರನ ಹೊಟ್ಟೆ ಸೀಳಿಕೊಂಡು ಹೊರಗೆ ಬಂದನು. ಅದರೊಂದಿಗೆ ಗಜಾಸುರನೂ ಸತ್ತುಬಿದ್ದನು.

ಇದನ್ನೆಲ್ಲ ನೋಡುತ್ತಿದ್ದ ಗಜಾಸುರನ ಪರಿವಾರದವರು ದೇವತೆಗಳ ಮೋಸವೆಂದು ಗರ್ಜಿಸಿ, ಯುದ್ಧಕ್ಕೆ ಬಂದರು. ಮಹಾವಿಷ್ಣು ಅವರೆಲ್ಲರನ್ನೂ ಸಂಹರಿಸಿಬಿಟ್ಟನು.

ತರುವಾಯ ಬ್ರಹ್ಮ, ವಿಷ್ಣು, ದೇವೇಂದ್ರ, ನಂದೀಶ್ವರ ಮೊದಲಾದವರು ತಮ್ಮ ನಿಜರೂಪ ಧರಿಸಿ ಶಿವನಿಗೆ ನಮಸ್ಕಾರ ಮಾಡಿದರು. ಅಲ್ಲಿಂದ ರುದ್ರಗಣಗಳನ್ನೆಲ್ಲಾ ಹಿಂದಿಟ್ಟುಕೊಂಡು ಕೈಲಾಸಕ್ಕೆ ಹಿಂದಿರುಗಿದರು. ಶಿವನು ತಾನು ಗಜಾಸುರನನ್ನು ಕೊಂದು ಬಂದಿರುವೆನೆಂದು ಪಾರ್ವತಿಗೆ ಸುದ್ದಿ ಕಳುಹಿಸಿದನು.

ಅದಕ್ಕಿಂತ ಮೊದಲೇ ಈ ವಾರ್ತೆಯನ್ನು ಕೇಳಿ ಸಂತೋಷದಲ್ಲಿದ್ದ ಪಾರ್ವತಿ, ತೈಲಾಭ್ಯಂಜನ ಮಾಡಿಕೊಂಡು ಗೃಹದೇವತೆಗಳನ್ನು ಪೂಜಿಸಲಿಕ್ಕಾಗಿ, ಗೃಹದ್ವಾರದಲ್ಲಿದ್ದ ಲಕ್ಷ್ಮೀ ಗಣಾಧಿಪತಿಗಳೊಂದಿಗೆ, "ಅಪ್ಪಗಳಿರಾ, ನಾನು ತೈಲಾಭ್ಯಂಜನಕ್ಕೆ ಹೋಗುತ್ತೇನೆ. ಎಚ್ಚರಿಕೆಯಿಂದ ಕಾದುಕೊಂಡಿರಿ! ನಾನು ಹೇಳುವವರೆಗೂ ಯಾರನ್ನೂ ಒಳಗೆ ಬರಲು ಬಿಡಬೇಡಿ" ಎಂದು ಹೇಳಿದಳು.

ಸ್ವಲ್ಪಹೊತ್ತಿಗೆ ನಂದೀಶ್ವರನೇ ಮೊದಲಾದವರು ಅಲ್ಲಿಗೆ ಬಂದು ಒಳಗೆ ಪ್ರವೇಶಿಸಲು ನೋಡಿದರು. ಆಗ ಲಕ್ಷ್ಮೀಗಣಪತಿಗಳು ಅವರನ್ನು ತಡೆದು, "ಅಮ್ಮನವರು ಅಭ್ಯಂಜನ ಸ್ನಾನದಲ್ಲಿದ್ದಾರೆ. ತಾನು ಹೇಳದೆ ಯಾರನ್ನೂ ಒಳಗೆ ಬಿಡಬಾರದೆಂದು



ಅಮ್ಮನವರ ಆಜ್ಞೆ. ಆದ್ದರಿಂದ ಎಲ್ಲರೂ ದೂರವೇ ಸಮಯ ಕಾದುಕೊಂಡು ನಿಲ್ಲಿರಿ" ಎಂದರು.

"ನಾವು ಈಶ್ವರಾಜ್ಞೆಯಿಂದ ಬಂದವರು. ಮೂರು ಲೋಕಗಳಲ್ಲಿಯೂ ಈಶ್ವರಾಜ್ಞೆಗೆ ಇದಿರಿಲ್ಲ. ಮಧ್ಯದಲ್ಲಿ ತಡೆಯಲು ನೀವಾರು?" ಎಂದು ರುದ್ರಗಣಗಳು, ಲಕ್ಷ್ಮೀಗಣಗಳೊಂದಿಗೆ ಹೋರಾಟಕ್ಕಿಳಿದರು. ಅಲ್ಲಿ ದೊಡ್ಡ ಕೋಲಾಹಲ ನಡೆಯಿತು.

ಈ ಕೋಲಾಹಲವನ್ನು ಕೇಳಿ ಪಾರ್ವತಿಯ ಪರಿಚಾರಿಕೆಯೊಬ್ಬಳು ಬಂದು ನೋಡಿ, ಪಾರ್ವತಿಯ ಬಳಿಗೆ ಓಡಿ, "ಅಮ್ಮಾ, ನಮ್ಮ ಲಕ್ಷ್ಮೀಗಣಗಳೂ, ರುದ್ರಗಣಗಳೂ ಹೊಡೆದಾಡಿಕೊಳ್ಳುತ್ತಿದ್ದಾರೆ" ಎಂದು ಹೇಳಿದಳು.

ರುದ್ರಗಣಗಳ ಪ್ರವರ್ತನೆಯಿಂದ ಪಾರ್ವತಿಗೆ ಕೋಪ ಬಂದಿತು. ಅವಳು ಕೂಡಲೇ ದೇವಗಣಗಳನ್ನು ಕರೆದು ಲಕ್ಷ್ಮೀಗಣಗಳಿಗೆ ಸಹಾಯಮಾಡುವಂತೆ ಹೇಳಿದಳು. ಲಕ್ಷ್ಮೀಗಣಗಳೂ ದೇವಗಣಗಳೂ ಒಂದಾಗಿ ರುದ್ರಗಣಗಳನ್ನು ಚೆನ್ನಾಗಿ ಹೊಡೆದು ಹಣ್ಣುಮಾಡಿಬಿಟ್ಟರು. ರುದ್ರಗಣಗಳು ತೀರಾ ಸೋತು ಹಿಂದೆ ಓಡಿದರು.

ಲಕ್ಷ್ಮೀಗಣಗಳ ಕೈಯಲ್ಲಿ ಓಡಿಹೋದ ರುದ್ರಗಣಗಳು ಶಿವನ ಹತ್ತಿರ ಬಂದು ಮೊರೆ ಇಟ್ಟರು. ಆಗ ಅಲ್ಲಿದ್ದ ನಾರದನು, "ಪಾರ್ವತಿಯ ದ್ವಾರಪಾಲಕರಿಗೆ ಇಷ್ಟು ಪೊಗರೇ? ಶಿವನ ಆಜ್ಞೆಯನ್ನೇ ಧಿಕ್ಕರಿಸುವುದುಂಟೆ? ಏನು ಕಾಲ ಬಂತಪ್ಪಾ!" ಎಂದು ಹೇಳಿಕೊಂಡನು.

ತನ್ನ ಭೃತ್ಯರು ಪೆಟ್ಟು ತಿಂದರೆಂದು ಕೇಳಿಯೇ ಕೋಪಗೊಂಡ ಶಿವನು, ನಾರದನು ಹೇಳಿಕೊಂಡುದನ್ನು ಕೇಳಿ ಇನ್ನಿಷ್ಟು ಕೆರಳಿದನು. ಅವನು ತನ್ನ ತ್ರಿಶೂಲವನ್ನು ಕಳುಹಿಸಿ, ಲಕ್ಷ್ಮೀಗಣಗಳ ತಲೆಗಳನ್ನು ಕಡಿಸಿಬಿಟ್ಟನು.

ತನ್ನ ಪ್ರೀತಿಯ ಕುಮಾರರ ತಲೆಗಳು ಬಿದ್ದುಹೋದುದನ್ನು ನೋಡಿ ಪಾರ್ವತಿ ದುಃಖಸಮುದ್ರದಲ್ಲಿ ಮುಳುಗಿದಳು.

ಪಾರ್ವತೀದೇವಿಯ ಮನೆಯ ದ್ವಾರದ ಹತ್ತಿರ ಈಗ ತಡೆಯುವವರಾರೂ ಇರಲಿಲ್ಲ. ಆದುದರಿಂದ ಶಿವನು ಬ್ರಹ್ಮ ವಿಷ್ಣುಗಳನ್ನು ಕರೆದುಕೊಂಡು ಪಾರ್ವತಿಯ ಮನೆಯೊಳಗೆ ಪ್ರವೇಶಿಸಿದನು. ಅಷ್ಟು ಹೊತ್ತಿಗೇ ಸ್ನಾನ ಮುಗಿಸಿ, ಅಲಂಕರಿಸಿಕೊಂಡು, ಗೃಹದೇವತೆಗಳನ್ನು ಪೂಜಿಸಿ ಮುಗಿಸಿದ್ದ ಪಾರ್ವತಿ ಲಕ್ಷ್ಮೀಗಣಗಳ ಸಾವಿನಿಂದ ದುಃಖದಲ್ಲಿ ಬಾಡಿಕೊಂಡಿದ್ದಳು. ಅಂತಲೇ ಬಂದವರನ್ನು ಅವಳು ಗೌರವಿಸಲಿಲ್ಲ.

ಶಿವನು ಪಾರ್ವತಿಯನ್ನು ಸಮಾಧಾನಪಡಿಸಬೇಕೆಂದು ಅವಳ ಹತ್ತಿರ ಬಂದನು. ಆದರೆ ಸಂತಪ್ತಳಾಗಿದ್ದ ಪಾರ್ವತೀದೇವಿ ಶಿವನನ್ನು ಕಣ್ಣೆತ್ತಿ ನೋಡಲೂ ಇಲ್ಲ.



ಆಗ ವಿಷ್ಣು ಪಾರ್ವತಿಯ ಹತ್ತಿರ ಬಂದು, "ತಂಗೀ, ಗಜಾಸುರನು ಸತ್ತುಹೋದುದಕ್ಕೆ ಮೂರು ಲೋಕಗಳೂ ಆನಂದದಲ್ಲಿ ಮುಳುಗಿರುವಾಗ ನೀನು ಇಷ್ಟು ದುಃಖದಲ್ಲಿ ಮುಳುಗುವಂತೆ ಏನಾಗಿದೆ? ನಿನಗೆ ಬಂದ ಕಷ್ಟವೇನೆಂದು ಹೇಳು. ನಾನು ತೀರಿಸುತ್ತೇನೆ" ಎಂದನು.

ಪಾರ್ವತಿ ವಿಷ್ಣುವನ್ನು ನೋಡಿ, "ಅಣ್ಣಾ, ಶಿವನು ನಿಷ್ಕಾರಣವಾಗಿ ನನ್ನ ಕುಮಾರರಾದ ಲಕ್ಷ್ಮೀಗಣಗಳನ್ನು ಕೊಂದುಬಿಟ್ಟನು. ಅವರನ್ನು ಬದುಕಿಸಿ, ಅವರಿಗೆ ತಕ್ಕ ಅಧಿಕಾರಗಳನ್ನು ಕೊಟ್ಟರೆ ಮಾತ್ರ ನನ್ನ ದುಃಖ ತೀರುವುದು" ಎಂದಳು.

ಆಗ ಶಿವನು ಗಜಾಸುರನಿಗೆ ತಾನು ಕೊಟ್ಟ ವರಗಳ ಸಂಗತಿಯನ್ನು ಕುರಿತು ಹೇಳಿದನು. ತನ್ನ ತಲೆ ಪೂಜನೀಯವಾಗಬೇಕೆಂದೂ, ತನ್ನ ಚರ್ಮವನ್ನು ಶಿವನು ಧರಿಸಬೇಕೆಂದೂ ಗಜಾಸುರನು ಕೇಳಿರುವುದನ್ನು ಹೇಳಿದನು ಶಿವ.

ಆದುದರಿಂದ ಲಕ್ಷ್ಮೀಗಣಗಳಿಗೆ ಅಧಿಪತಿಯಾದವನ ಶರೀರವನ್ನು ಸಭೆಗೆ ತರಿಸಲಾಯಿತು. ರುದ್ರಗಣಗಳನ್ನು ಕಳುಹಿಸಿ ಗಜಾಸುರನ ತಲೆಯನ್ನೂ ತರಿಸಿ, ಅದನ್ನು ಲಕ್ಷ್ಮೀಗಣಾಧಿಪತಿಯ ಶರೀರಕ್ಕೆ ಅಂಟಿಸಿದರು.

ಕೂಡಲೇ ಲಕ್ಷ್ಮೀಗಣಾಧಿಪತಿ, ನಿದ್ದೆಯಿಂದ ಎದ್ದವನ ಚಂದದಲ್ಲಿ ಎದ್ದು, ಪಾರ್ವತಿಗೂ ಮಹಾವಿಷ್ಣುವಿಗೂ ನಮಸ್ಕಾರ ಮಾಡಿದನು. ಅದೇ ವಿಧವಾಗಿ ಉಳಿದ ಇಪ್ಪತ್ತು ಮಂದಿ ಗಣಾಧಿಪತಿಗಳ ಮುಂಡಗಳಿಗೂ ಆನೆಯ ತಲೆಗಳನ್ನು ತಗಲಿಸಿದರು. ಕೂಡಲೇ ಅವರು ಕೂಡಾ ಬದುಕಿದರು. ಹೀಗಾದುದನ್ನು ನೋಡಿ ಪಾರ್ವತಿ ಬಹಳ ಸಂತೋಷಪಟ್ಟು ಸ್ಮಿತಮುಖಿಯಾದಳು. ಅದನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು. ಎಲ್ಲರೂ ಉತ್ಸಾಹದಿಂದ ಸಭೆಯಾಗಿ ಸೇರಿದರು.

ಆ ಬಗೆಯ ಪರಮಾನಂದದ ಸಭೆಯಲ್ಲಿ, ವಿಶ್ವದರ್ಶಿ ಎಂಬ ಉಪಬ್ರಹ್ಮನು ಎದ್ದುನಿಂತು, "ಓ ಶಿವಪಾರ್ವತಿಗಳೇ! ನನ್ನ ಕುಮಾರಿಯರಾದ ಜಯಲಕ್ಷ್ಮಿ ಮೊದಲಾದವರನ್ನು ಈ ಲಕ್ಷ್ಮೀಗಣಾಧಿಪತಿಗಳಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದೇನೆ. ಅಪ್ಪಣೆಯೆ?" ಎಂದು ಕೇಳಿದನು.

ಆ ಮಾತು ಕೇಳಿ ಎಲ್ಲರೂ ಸಂತೋಷಪಟ್ಟು ಒಪ್ಪಿಗೆ ನೀಡಿದರು. ಬ್ರಹ್ಮನು ತಾನೇ ಪುರೋಹಿತನಾಗಿದ್ದು ವಿಶ್ವದರ್ಶಿಯ ಕುಮಾರಿಯರನ್ನು ಗಣಾಧಿಪತಿಗಳೊಂದಿಗೆ ಮದುವೆ ಮಾಡಿದನು. ಆ ಗಣಾಧಿಪತಿಗಳಲ್ಲಿ ಲಕ್ಷ್ಮೀಗಣಾಧಿಪತಿ ದೊಡ್ಡವನು. ಅವನ ಹೆಂಡತಿಯ ಹೆಸರು ಜಯಲಕ್ಷ್ಮಿ. ಅವಳೇ ದೊಡ್ಡವಳು.

ಇಪ್ಪತ್ತೊಂದು ಮಂದಿ ಗಣಾಧಿಪತಿಗಳಿಗೂ, ವಿಶ್ವದರ್ಶಿ ಉಪಬ್ರಹ್ಮನ ಕುಮಾರಿಯರೊಂದಿಗೆ ಮದುವೆಯಾದ ಕೂಡಲೇ ಪಾರ್ವತಿ ಶಿವನೊಂದಿಗೆ,

"ಪರಮೇಶ್ವರಾ, ನನ್ನ ಕುಮಾರರಿಗೆ ಅಧಿಕಾರಗಳನ್ನು ಕೂಡಾ ಕೊಟ್ಟು ಗಜಾಸುರನಿಗೆ ಕೊಟ್ಟ ವರಗಳನ್ನು ಸಾರ್ಥಕ ಮಾಡಬೇಕು" ಎಂದು ಕೇಳಿಕೊಂಡಳು.

ಶಿವನು ಅವಳ ಅಪೇಕ್ಷೆಯನ್ನು ನೆರವೇರಿಸುವ ಆಲೋಚನೆಯಲ್ಲಿರುವಾಗ, ಅಲ್ಲಿಯೇ ಇದ್ದ ಕುಮಾರಸ್ವಾಮಿ ಮುಂದೆ ಬಂದು, ಪಾರ್ವತೀ ಪರಮೇಶ್ವರರಿಗೆ ವಂದಿಸಿ, ತನಗೆ ಕೂಡಾ ಗಣಾಧಿಪತ್ಯ ಕೊಡಬೇಕೆಂದು ಕೇಳಿಕೊಂಡನು.

"ನಿನಗೆ ಆಗಲೇ ದೇವಗಣಗಳ ಮೇಲೆ ಆಧಿಪತ್ಯ ಕೊಟ್ಟಿದ್ದೇವಷ್ಟೆ? ಅದೇ ನಿನಗೆ ಸಾಕು. ರುದ್ರ ಗಣಗಳ ಮೇಲೆ ಅಧಿಕಾರವನ್ನು ಲಕ್ಷ್ಮೀಗಣಾಧಿಪತಿಗಳಿಗೆ ಕೊಡುತ್ತೇವೆ. ಅದಕ್ಕೆ ಒಪ್ಪಿಕೊಂಡುಬಿಡು" ಎಂದನು ಶಿವ.

ಆದರೆ ಕುಮಾರಸ್ವಾಮಿ ಅದಕ್ಕೆ ಒಪ್ಪದೆ, ತನಗೆ ಕೂಡಾ ಗಣಾಧಿಪತ್ಯವು ಬೇಕೇಬೇಕೆಂದು ಹಟ ಹಿಡಿದನು.

ಆಗ ಶಿವನು ಕುಮಾರಸ್ವಾಮಿಗೂ, ಲಕ್ಷ್ಮೀಗಣಾಧಿಪತಿಗಳಲ್ಲಿ ಹಿರಿಯನಿಗೂ ಒಂದು ಸ್ಪರ್ಧೆಯನ್ನು ನೆರವೇರಿಸಲು ಹೇಳಿದನು. ಅದೇನೆಂದರೆ, ಅವರಿಬ್ಬರೂ ತಮ್ಮ ತಮ್ಮ ವಾಹನಗಳ ಮೇಲೆ ಪುಣ್ಯಕ್ಷೇತ್ರಗಳ ದರ್ಶನ ಮಾಡುತ್ತ ಭೂಪ್ರದಕ್ಷಿಣೆ ಮಾಡಿ ಕೈಲಾಸಕ್ಕೆ ಹಿಂದಿರುಗಿ ಬರಬೇಕು. ಯಾರು ಮೊದಲು ಹಿಂದಿರುಗಿ ಬರುವರೋ ಅವರಿಗೇ ಸರ್ವಗಣಾಧಿಪತ್ಯವನ್ನೂ ಕೊಡಲಾಗುವುದು. ಇದಕ್ಕೆ ಅವರಿಬ್ಬರೂ ಒಪ್ಪಿದರು.

ಶಿವನು ಕುಮಾರಸ್ವಾಮಿಗೆ ವಾಹನವಾಗಿ ನವಿಲನ್ನು ಕೊಟ್ಟು, ಇಲಿಯ ರೂಪದಲ್ಲಿ ತನ್ನ ಹತ್ತಿರವಿರುವ ಗಜಾಸುರನನ್ನು ಲಕ್ಷ್ಮೀಗಣಾಧಿಪತಿಗೆ ವಾಹನವಾಗಿ ಕೊಟ್ಟನು. ಕೂಡಲೇ ಕುಮಾರಸ್ವಾಮಿ ನವಿಲಿನ ಮೇಲೆ ಏರಿ ರಿವ್ವನೆ ಆಕಾಶದಲ್ಲಿ ಹಾರಿ ಹೋದನು.

ಲಕ್ಷ್ಮೀಗಣಾಧಿಪತಿ ಪಾರ್ವತಿಯ ಬಳಿಗೆ ಹೋಗಿ, "ಅಮ್ಮಾ, ನನಗೆ ಎಷ್ಟು ಅನ್ಯಾಯವಾಗಿದೆಯೋ ನೋಡು! ಕುಮಾರಸ್ವಾಮಿ ಆಜಾನುಬಾಹುವಾದ ಬಲಿಷ್ಠನು. ಅಂಥವನಿಗೆ ನವಿಲನ್ನು ವಾಹನವಾಗಿ ಕೊಟ್ಟರು. ನಾನು ಭಾರವಾದ ತಲೆಯಿಂದ ದೊಡ್ಡ ಹೊಟ್ಟೆಯಿಂದ ಇಲಿಯ ಮೇಲೆ ಹೇಗೆ ಪ್ರಯಾಣ ಮಾಡಲಿ? ಇಂತಹ ಪರೀಕ್ಷೆ ಇಡುವುದಕ್ಕಿಂತಲೂ, ನಮಗೆ ಅಧಿಕಾರ ಕೊಡಲಾಗುವುದಿಲ್ಲವೆಂದು ಹೇಳಿದರೆ ಸರಿಯಾಗುತ್ತಿತ್ತು!" ಎಂದನು.

ಅದಕ್ಕೆ ಪಾರ್ವತಿ: "ನಾನೇನೂ ಮಾಡುವಂತಿಲ್ಲವಲ್ಲಪ್ಪಾ. ನಿನ್ನ ಮಾವಯ್ಯನಾದ ವಿಷ್ಣುವಿನ ಹತ್ತಿರ ಹೋಗಿ ಉಪಾಯ ಕೇಳು" ಎಂದು ಹೇಳಿದಳು.





# ಯಾಚಕನ ಚಳಿ

ಒಂದಾನೊಂದು ಕಾಲದಲ್ಲಿ ಶ್ವೇತ ನಗರವನ್ನು ಚಳಿಗಾಲವು ಬಹಳ ಕ್ರೂರವಾಗಿ ಆಕ್ರಮಿಸಿಕೊಂಡಿತು. ಕಾಲಪುರುಷನು ಚಳಿ ಪುರುಷನೆನಿಸಿ ಎಲ್ಲರನ್ನೂ ಹಿಡಿದು ಒತ್ತಿ ಹಿಂಡುವಂತೆ ಅನಿಸತೊಡಗಿತು. ಕತ್ತಲೆ ಪ್ರವೇಶಿಸುವಷ್ಟರಲ್ಲಿ, ಅದುವರೆಗೂ ಯಾರೂ ಅನುಭವಿಸಿರದಂತಹ ಕಡು ಚಳಿ ಪ್ರವೇಶಿಸಿ, ರಾತ್ರಿಯಾದಂತೆ ಹೆಚ್ಚುತ್ತಾ ಹೋಗುತ್ತಿತ್ತು. ಕತ್ತಲೆಯಾಗುತ್ತಲೇ ಜನರೆಲ್ಲ ಕಿಟಕಿ ಬಾಗಿಲುಗಳನ್ನು ಮುಚ್ಚಿಕೊಂಡು ಮನೆಯೊಳಗೇ ಇರುತ್ತಿದ್ದರು. ಆದು ಹೊರಗಿನ ಚಳಿ ಒಳಗೆ ಪ್ರವೇಶಿಸೀತೆಂಬ ಭಯದಲ್ಲಿ ಕಂಡಿ ಸಂದು ತೂತುಗಳಿಗೆಲ್ಲಾ ಬಟ್ಟೆ ತೂರಿಸಿ ಮುಚ್ಚುತ್ತಿದ್ದರು.

ಅಂತಹ ದಿನಗಳಲ್ಲಿ ಜಿತೇಂದ್ರನೆಂಬ ಒಬ್ಬ ಭಾಗ್ಯವಂತನ ಮನೆಯಲ್ಲಿ ಒಂದು ದಿನ ಒಂದು ಸಮಸ್ಯೆ ತಲೆ ಎತ್ತಿತು. ಅದು ರಾತ್ರಿಯ ಹೊತ್ತಿನಲ್ಲಿ ಎದ್ದ ಸಮಸ್ಯೆ. ಜಿತೇಂದ್ರನ ತಂದೆ ಭೋಗೇಂದ್ರನಿಗೆ ಅರುವತ್ತು ವರ್ಷ ದಾಟಿಹೋಗಿತ್ತು. ಉಣ್ಣೆಯ ಶಾಲುಪಯನ್ನು ಹೊದ್ದುಕೊಂಡಿದ್ದರೂ ಚಳಿಯನ್ನು ತಡೆದುಕೊಳ್ಳಲು ಅವನಿಂದಾಗದೆ ಹೋಯಿತು. ಅವನಿಗಾಗಿ ಮನೆಯೊಳಗೇ ಚಳಿ ಬೆಂಕಿ ಉರಿಸಿದರು. ಆದರೂ ಅವನ ಚಳಿ ತಗ್ಗಲಿಲ್ಲ. ಚಳಿಯಿಂದ ಹೊರಡುವ ಹೂಂಗುಡುಕೆಯ ಸ್ವರವೂ ನಡುಗುತ್ತಿದ್ದಿತು.

"ಇದು ಮಾಮೂಲು ಚಳಿಯಲ್ಲಪ್ಪಾ, ಜ್ವರದ ಚಳಿ. ಚಳಿಜ್ವರ! ವೈದ್ಯನನ್ನು ಕರೆಸಿ ಏನಾದರೂ ಮದ್ದುಕೊಟ್ಟ ಹೊರತು ಇದು ತಗ್ಗಲಾರದು. ಸುಮ್ಮನಿದ್ದರೆ ಬೆಳಗಾಗುವುದರೊಳಗೆ ಏನಾಗುತ್ತೋ! ನನಗೆ ಬಹಳ ಭಯವಾಗಿದೆ!" ಎಂದಳು ಜಿತೇಂದ್ರನ ತಾಯಿ.

"ಈ ರಾತ್ರಿಯಲ್ಲಿ ಇಂತಹ ಚಳಿಯಲ್ಲಿ ವೈದ್ಯನ ಮನೆಗೆ ಯಾರು ಹೋಗುತ್ತಾರೆ? ಹೋದರೆ ಕೂಡಾ ವೈದ್ಯನು ಈ ಚಳಿಯಲ್ಲಿ ಹೊರಟು ನಮ್ಮ ಮನೆಗೆ ಬಂದು ರೋಗ ನಿದಾನಮಾಡಿ ಮದ್ದು ಕೊಡುವುದುಂಟೆ?" ಎಂದು ಜಿತೇಂದ್ರನು ಅನುಮಾನದ ರಾಗ ತೆಗೆದನು.

"ವೈದ್ಯರು ಈ ಚಳಿಗೆ ಮನೆ ಕದಲಿ ಬಾರದಿದ್ದರೂ, ನಾವು ಹೇಳುವ ರೋಗದ ಲಕ್ಷಣಗಳನ್ನು ಕೇಳಿ ಏನಾದರೂ ಉಪಶಮನದ ಮದ್ದು



ಕೊಟ್ಟಾರು" ಎಂದು ಜಿತೇಂದ್ರನ ತಾಯಿ ಸಲಹೆ ಮಾಡುವಂತೆ ಹೇಳಿದಳು.

ಆದರೆ ಮನೆಬಾಗಿಲು ತೆರೆದು ಹೊರಗೆ ಹೋಗಲು ಯಾರೂ ಸಿದ್ಧರಿರಲಿಲ್ಲ. ಮನೆಯಲ್ಲಿ ಇಬ್ಬರು ಸೇವಕರಿದ್ದರು. ಅವರು ತಮ್ಮಿಂದ ನಡೆಯಲು ಸಾಧ್ಯವಾಗದು, ಕಾಲುಗಳು ಮರಗಟ್ಟಿ ನಡುದಾರಿಯಲ್ಲಿ ಬಿದ್ದೇವು ಎಂದರು.

ಕಡೆಗೆ ಜಿತೇಂದ್ರನು ಕೋಪದಿಂದ ಕಣ್ಣು ಕೆಕ್ಕರಿಸಿ ಹೇಳಿದಾಗ, ಒಬ್ಬ ಸೇವಕನು ಯಜಮಾನನಿಗೆ ಹೆದರಿ ಧೈರ್ಯಮಾಡಿ ಹೋಗಲು ತಯಾರಾಗಿ, ಮನೆಯ ಹೊರಬಾಗಿಲು ತೆರೆದನು.

ಅವನು ಬಾಗಿಲು ತೆರೆದ ಕೂಡಲೇ, "ಅಮ್ಮಾ ಒಂದು ಮುದ್ದೆ ಕವಳ ಹಾಕಿ ತಾಯೇ!" ಎಂಬ ಕೂಗು ಆ ಸೇವಕನ ಕಿವಿಗೆ ಬಿತ್ತು.

ದಿಟ್ಟಿಸಿ ನೋಡಿದಾಗ ಅವನ ಮುಂದೆ ಮೈ ನಡುಗಿಸುವ ಚಳಿಯಲ್ಲಿ ಒಬ್ಬ ಯಾಚಕನು ನಿಂತಿದ್ದನು. ಅವನ ಸೊಂಟದಲ್ಲಿ ಸಣ್ಣದೊಂದು ಬೈರಾಸಿನ ಹೊರತು ಬೇರೆ ಬಟ್ಟೆಯೇ ಇರಲಿಲ್ಲ. ಬೇರೆ ಯಾವ ಆಚ್ಛಾದನವೂ ಅವನ ಮೇಲಿರಲಿಲ್ಲ. ಕೈಯಲ್ಲಿ ಒಂದು ಮಣ್ಣಿನ ಗುಂಡುಬಟ್ಟಲು ಮಾತ್ರವಿದ್ದಿತು. ವಿಶೇಷವೇನೆಂದರೆ ಅಂತಹ ಚಳಿಯಲ್ಲಿ ಅವನು ಸ್ವಲ್ಪಮಾತ್ರವೂ ನಡುಗುತ್ತಿರಲಿಲ್ಲ.

ಅವನನ್ನು ನೋಡಿ ಆ ಸೇವಕನು ಬೇಗ ಬೇಗ ಒಳಗೆ ಹೋಗಿ ಜಿತೇಂದ್ರನೊಂದಿಗೆ, "ಅಯ್ಯಾ! ನಮಗಿನ್ನು ವೈದ್ಯರ ಅಗತ್ಯವೇ ಇಲ್ಲ. ಒಬ್ಬ ಮಹಾಯೋಗಿ ನಮ್ಮ ಮನೆಯ ಬಾಗಿಲ ಮುಂದೆ ನಿಂತಿದ್ದಾನೆ. ಅವನ ಮಹಿಮೆ ಎಷ್ಟು ದೊಡ್ಡದೆಂದರೆ ಇಂಥಾ ಗಡಗಡಿಸುವ ಚಳಿಯಲ್ಲಿಯೂ ಅವನು ಬರಿಮೈಯಲ್ಲಿ ಚೂರೂ ನಡುಗುವುದಿಲ್ಲ. ದೇವರೇ ಅವನನ್ನು ಕಳುಹಿಸಿರಬೇಕು. ನೋಡಿ ಸ್ವಾಮೀ" ಎಂದು ಹೇಳಿದನು.

ಈ ಅದ್ಭುತ ವಾರ್ತೆಯನ್ನು ಕೇಳಿ ಜಿತೇಂದ್ರನು ಆತುರದಿಂದ ಬೀದಿ ಬಾಗಿಲಿಗೆ ಹೋಗಿ ನೋಡಿದನು. ಯಾಚಕನು ಬರಿಗೈಯಲ್ಲಿ ಬಂದ ಜಿತೇಂದ್ರನನ್ನು ನೋಡಿ, ತುಂಬಾ ದೈನ್ಯತೆಯಿಂದ, "ಅಯ್ಯಾ, ಹಸಿವಿನ ಸಂಕಟ ತಾಳಲಾಗದಿದ್ದೇನೆ. ಒಂದು ಮುಷ್ಟಿ ಅನ್ನ ಹಾಕಿಸಿರಯ್ಯಾ! ನಿಂ ಪುಣ್ಯ ಸ್ವಾಮೀ! ಮಾತಾಡಲಿಕ್ಕೂ ಶಕ್ತಿಯಿಲ್ಲ. ಬೇಗ ಏನಾದರಿಷ್ಟು ನೀಡಿ ಜೀವ ಉಳಿಸಿರಯ್ಯಾ!" ಎಂದನು.

ಜಿತೇಂದ್ರನು ಅವನನ್ನು ಪರೀಕ್ಷಿಸಿ ನೋಡುತ್ತಾ, "ಇಗೋಪ್ಪಾ, ನನ್ನ ತಂದೆ ತಾಳಲಾಗದ ಚಳಿಜ್ವರದಿಂದ ಸಂಕಟಪಡುತ್ತಿದ್ದಾರೆ. ಅವರ ಸಂಕಟ ತಗ್ಗಿಸಿದೆಯೆಂದರೆ ನಿನಗೆ ಮುಷ್ಟಿಅನ್ನವಲ್ಲ, ಹೊಟ್ಟೆ ತುಂಬಾ ಊಟ ಹಾಕುತ್ತೇನೆ. ಏನನ್ನುವಿ?" ಎಂದನು.

ಅದಕ್ಕೆ ಯಾಚಕನು ದೀನದನಿಯಿಂದ, "ಅಯ್ಯಾ, ಹಸಿವೆಯಿಂದ ಸಾಯಲಾದ ನನಗೆ ಹೀಗೆಲ್ಲಾ ಷರತ್ತು

ಹಾಕಬೇಡಿರಿ. ನನಗೆ ವೈದ್ಯಕೀಯವೇನೂ ತಿಳಿಯದು. ಗತಿ ಗೋತ್ರವಿಲ್ಲದ ಸಾಧಾರಣ ಭಿಕ್ಷುಕನಯ್ಯಾ ನಾನು" ಎಂದನು.

ಜಿತೇಂದ್ರನು ಒಂದು ಕ್ಷಣ ಆಲೋಚಿಸಿ, "ಹೋಗಲಿ, ಪಕ್ಕದ ಬೀದಿಯಲ್ಲಿರುವ ವೈದ್ಯರ ಮನೆಗೆ ಹೋಗಿ ಮದ್ದು ತಂದುಕೊಡುವಿಯಾ?" ಎಂದು ಯಾಚಕನನ್ನು ಕೇಳಿದನು.

"ಮೊದಲೇ ಹೇಳಿದೆನಲ್ಲಾ? ನನ್ನ ಮೈಗೆ ಈಗ ಏನೇನೂ ಶಕ್ತಿಯಿಲ್ಲ. ಒಂದೆರಡು ತುತ್ತು ತಿಂದರೆ ಹೊರತು ಕದಲಲಾರೆ" ಎನ್ನುತ್ತ ಯಾಚಕನು ನಿಂತಲ್ಲೇ ಕುಸಿದು ಕಳಿತನು.

"ಈ ವೇಷಕ್ಕೇನು ಬಿಡು. ಆಲೋಚಿಸು. ಮೊದಲು ಮದ್ದು ತಂದರೇನೇ ನಿನಗೆ ಅನ್ನ ಹಾಕುವುದು. ನಿನ್ನಿಂದಾಗದಿದ್ದರೆ ಇನ್ನೊಬ್ಬರನ್ನು ಕಳುಹಿಸುತ್ತೇನೆ. ನಿನಗೆ ಅನ್ನಬಿಟ್ಟು ಮಣ್ಣೂ ಇಲ್ಲಿ ಸಿಗದು" ಎಂದನು ಜಿತೇಂದ್ರ.

ಮೊದಲು ಹೊಟ್ಟೆಗೆ ಹಾಕಿಬಿಟ್ಟರೆ ಅದನ್ನು ತಿಂದು ಆವನ ಪಾಡಿಗೆ ಹೋಗಿಬಿಡುತ್ತಾನೆಂದು ಜಿತೇಂದ್ರನ ಅನುಮಾನ.

ಬೇರೆ ಉಪಾಯವಿಲ್ಲದೆ ವೈದ್ಯನ ಮನೆಗೆ ಹೋಗಲು ಯಾಚಕನು ಒಪ್ಪಿದನು. ಆಗ ಜಿತೇಂದ್ರನು ತಂದೆಯ ರೋಗಲಕ್ಷಣಗಳನ್ನು ಒಂದು ಕಾಗದದಲ್ಲಿ ಬರೆದು ಯಾಚಕನ ಕೈಗೆ ಕೊಟ್ಟು, "ಇದನ್ನು ಕೊಟ್ಟು ವೈದ್ಯರ ಉತ್ತರವನ್ನು ಕೂಡಾ ಬರೆಯಿಸಿ ಕೊಂಡು ಬಾ" ಎಂದು ವೈದ್ಯನ ಮನೆಗೆ ದಾರಿ ಗುರುತುಗಳನ್ನು ಹೇಳಿದನು.

ವೈದ್ಯನ ಉತ್ತರವನ್ನು ಕಾಗದದಲ್ಲಿ ಬರೆಯಿಸಿ ಕೊಂಡು ಬಾರದಿದ್ದರೆ, ಅವನು ದಾರಿಯಲ್ಲಿ ಸಿಕ್ಕಿದ ಯಾವ ಮಣ್ಣಿನುಂಡೆಗಳನ್ನೋ ಮಾಡಿ ತಂದು, ಅದೇ ವೈದ್ಯರು ಕೊಟ್ಟ ಔಷಧಿ ಎನ್ನಬಹುದೆಂದು ಜಿತೇಂದ್ರನು ಹಾಗೆ ಬರೆದು ತರುವಂತೆ ಹೇಳಿದ್ದನು.



ಯಾಚಕನು ಇಲ್ಲದ ತಾಳ್ಮೆಯನ್ನು ತಂದು ಕೊಂಡು ಅಲ್ಲಿಂದ ಹೊರಟನು. ಅವನು ಖಂಡಿತ ವಾಗಿಯೂ ಮದ್ದು ತರುವನೆಂದು ನಂಬಿ ಜಿತೇಂದ್ರನು ಒಳಗೆ ಹೋಗಿ ಮನೆಯವರೊಂದಿಗೆ ನಡೆದ ಸಂಗತಿ ಹೇಳಿದನು. ಆಗ ಎಲ್ಲರೂ ಯಾಚಕನು ಚಳಿಗೆ ನಡುಗದಿರುವುದನ್ನು ವಿಚಿತ್ರವಾಗಿ ಹೇಳಿ ಆಶ್ಚರ್ಯ ಪಟ್ಟುಕೊಂಡರು.

"ಕೆಲವು ಮಂದಿ ಭಿಕ್ಷುಕರಿಗೆ ಚಳಿಯ ಬಾಧೆ ಯನ್ನು ತಪ್ಪಿಸಿಕೊಳ್ಳುವಂತಹ ಮೂಲಿಕೆಗಳು ತಿಳಿದಿರುತ್ತವೆಂದು ಕೇಳಿದ್ದೇನೆ. ಅದನ್ನು ಬಾಯಿ ಯೊಳಗಿಟ್ಟು ಜಗಿದುಕೊಂಡು ಅವರು ಎಂತಹ ಚಳಿಯಲ್ಲಿಯೂ ಸಾಧಾರಣವಾಗಿ ತಿರುಗಾಡುತ್ತಾರೆ. ಅವನು ಮದ್ದು ತಂದ ಮೇಲೆ ಅವನನ್ನು ಕೇಳಿ ಆ ಮೂಲಿಕೆ ಯಾವುದೆಂದು ತಿಳಿಯಬೇಕು. ಅಂಥಾದ್ದು ಮನೆಯಲ್ಲಿದ್ದರೆ ಒಳ್ಳೆಯದು" ಎಂದಳು ಜಿತೇಂದ್ರನ ತಾಯಿ.

"ಅಂಥ ಮೂಲಿಕೆ ವಿಷಯ ಹೇಗಿದ್ದರೂ, ಈ ಚಳಿಕಾಲದಲ್ಲಿ ಇಂತಹ ಕೆಲಸದಾಳೊಬ್ಬನಿದ್ದರೆ ಬಹಳ ಒಳ್ಳೇದು. ಇವನಿಗಾದರೆ ಹೆಚ್ಚು ಸಂಬಳ ಸಹಾ ಕೊಡಬೇಕಾಗಿಲ್ಲ. ದಿನಾ ಎರಡು ಹೊತ್ತು ಊಟ ತಿಂಡಿ ಕೊಟ್ಟುಬಿಟ್ಟರೆ ಎಷ್ಟು ಕೆಲಸವಾದರೂ ಮಾಡಿಯಾನು" ಎಂದನು ಜಿತೇಂದ್ರ.

ಸ್ವಲ್ಪಹೊತ್ತಿನ ಮೇಲೆ ಯಾಚಕನು ಹಿಂದಿರುಗಿ ಬಂದನು. ವೈದ್ಯನು ಗುಳಿಗೆಗಳನ್ನೂ, ಅದನ್ನು ಉಪಯೋಗಿಸುವ ಕ್ರಮವನ್ನೂ ಬರೆದು ಕಳುಹಿಸಿದ್ದನು. ಆ ಗುಳಿಗೆಗಳಿಂದ ನಿಮಿಷಮಾತ್ರದಲ್ಲಿ ಭೋಗೇಂದ್ರನ ಮೇಲೆ ಪರಿಣಾಮವಾಗಿ ಜ್ವರವಿಳಿದು ನರಳಿಕೆ ನಿಂತು, ಸುಖವಾಗಿ ನಿದ್ದೆ ಮಾಡಿದನು.

ಇಷ್ಟರೊಳಗೆ ಜಿತೇಂದ್ರನ ಹೆಂಡತಿ ಯಾಚಕನಿಗೆ ರಾತ್ರಿ ಇಲ್ಲೇ ಇರುವಂತೆ ಹೇಳಿ, ಹೊಟ್ಟೆ ತುಂಬ ಊಟ ಬಡಿಸಿದಳು. ಅವನ ಊಟ ಮುಗಿದ ಮೇಲೆ, "ನಿನಗೆ, ಹಾಲು ಹಿಂಡಲು ಗೊತ್ತಿದೆಯೇ ?" ಎಂದು ಕೇಳಿದಳು.

"ಗೊತ್ತಿದೆ ತಾಯಿ" ಎಂದ ಯಾಚಕ.

ಜಿತೇಂದ್ರನ ಮನೆಯಲ್ಲಿ ಎರಡು ಹಸುಗಳೂ, ಎರಡು ಎಮ್ಮೆಗಳೂ ಇದ್ದುವು. ಚಳಿಯ ತೀವ್ರತೆಯ ಕಾರಣದಿಂದ ಸೇವಕರು ಹಾಲು ಹಿಂಡಲು ಹಟ್ಟಿಗೆ ಹೋಗಲು ಸಾಧ್ಯವೇ ಇಲ್ಲವೆಂದು ಹೇಳಿಬಿಟ್ಟಿದ್ದರು. ಇನ್ನೂ ಹಾಲು ಹಿಂಡದ್ದರಿಂದ ಅವುಗಳು ಕೂಗುತ್ತಿದ್ದುವು.

ಜಿತೇಂದ್ರನ ಹೆಂಡತಿ ಯಾಚಕನಿಗೆ ಹಿಂಡುವ ಚೆಂಬನ್ನೂ, ಬಿಂದಿಗೆಯನ್ನೂ ಕೊಟ್ಟು, "ಹಾಗಾದರೆ ಹಟ್ಟಿಗೆ ಹೋಗಿ ಹಸು, ಎಮ್ಮೆಗಳ ಹಾಲು ಹಿಂಡಿಕೊಂಡು ಬಾರಪ್ಪಾ" ಎಂದು ಲಾಂದ್ರ ತಂದು ಅವನಿಗೆ ಕೊಟ್ಟಳು.

ಯಾಚಕನು ಕೂಡಲೇ ಚೆಂಬು ಬಿಂದಿಗೆಗಳನ್ನು ತೆಗೆದುಕೊಂಡು ಹಟ್ಟಿಗೆ ಹೋಗಿ ಲಾಂದ್ರ ಬೆಳಗಿಸಿ ಹಾಲು ಹಿಂಡಿ ತೆಗೆದುಕೊಂಡು ಬಂದನು. ಇದನ್ನು ನೋಡಿ ಜಿತೇಂದ್ರನ ಹೆಂಡತಿಗೆ ಬಹಳ ಸಂತೋಷವಾಯಿತು. ಮನೆಯಲ್ಲಿದ್ದವರೆಲ್ಲಾ ತಮ್ಮ ಚಳಿಯ



ಕಷ್ಟ ತೀರಿದಷ್ಟು ಸಂತೋಷಪಟ್ಟರು. ಏಕೆಂದರೆ ಅಷ್ಟು ಚಳಿಯಲ್ಲಿಯೂ ಈ ಯಾಚಕನು ಹೊರಗೆ ಆಗಬೇಕಾದ ಕೆಲಸವನ್ನು ಮಾಡುತ್ತಾನಷ್ಟೇ ?

ಯಾಚಕನಿಗೆ ಚಾವಡಿಯ ಬದಿಯಲ್ಲಿ ಒಂದು ಚಾಪೆ ಕೊಟ್ಟು ಹಾಸಿಕೊಂಡು ಮಲಗಲು ಹೇಳಿದರು.

" ಹೊದ್ದುಕೊಳ್ಳಲಿಕ್ಕೆ ಏನಾದರೂ ಇದ್ದರೆ ಕೊಡಿರಮ್ಮಾ " ಎಂದನು ಯಾಚಕ.

" ಅಕೋ, ಅಲ್ಲಿ ಹಟ್ಟೀ ಹತ್ತಿರ ಗೋಡೇ ಬದಿಯ ಕೋಲಿನಲ್ಲಿ ಒಂದು ಕಂಬಳಿ ಇದೆ. ಹೋಗಿ ತಂದುಕೋ " ಎಂದಳು ಜಿತೇಂದ್ರನ ತಾಯಿ.

ಅವನು ಚಾವಡಿಯಿಂದ ಅಂಗಳಕ್ಕೆ ಇಳಿಯುತ್ತಿರಲು, ರಿವ್ವನೆ ಚಳಿ ಗಾಳಿಯೊಂದು ಬೀಸಿತು. ಅವನು ಗಾಬರಿಬಿದ್ದು ಮೈ ನಡುಗಿಸಿ ಎದೆಯನ್ನು ಕೈಗಳಿಂದ ಮುಚ್ಚಿಕೊಂಡು ಹಿಂದಿರುಗಿ, " ಅವ್ವಾ ! ಬಹಳ ಚಳಿ ! ಒಳಗೆ ಬೇರೆ ಕಂಬಳಿಯೇ ಇಲ್ಲವೇ ?" ಎಂದನು ನಡುಗುವ ಸ್ವರದಲ್ಲಿ.

ಯಾಚಕನ ಮಾತು ಕೇಳಿ ಎಲ್ಲರಿಗೂ ಬೆರಗು ಬಡೆಯಿತು. ಜಿತೇಂದ್ರನು ಆಶ್ಚರ್ಯದಿಂದ ಅವನನ್ನು ನೋಡಿ, " ನಿನಗೆ ಚಳಿಯಾಗುತ್ತದೇನು ? " ಎಂದನು.

" ಅದೇನು ಹೀಗೆ ಕೇಳುವಿರಿ ಸ್ವಾಮೀ ! ಮನುಷ್ಯನಾದವನಿಗೆ ಚಳಿಯಾಗದೆ ಇರುತ್ತದೆಯೇ ?" ಎಂದನು ಯಾಚಕ.

" ಹಾಗಾದರೆ ನೀನು ವೈದ್ಯರ ಮನೆಗೆ ಹೋಗುವಾಗ ನಿನಗೆ ಚಳಿ ತಿಳಿಯಲಿಲ್ಲವೇನು ? " ಎಂದು ಕೇಳಿದನು ಜಿತೇಂದ್ರ.

" ಅದೇನೋ ಸ್ವಾಮೀ ? ಎರಡು ದಿನಗಳಿಂದ ನನ್ನ ಹೊಟ್ಟೆಗೆ ಒಂದಗಳೂ ಬಿದ್ದಿರಲಿಲ್ಲ. ಎಲ್ಲಿಯೂ ಏನೂ ಸಿಕ್ಕಲಿಲ್ಲ. ಹಸಿವಿನ ಸಂಕಟದ ಹೊರತು ಮತ್ತೊಂದೂ ಗೊತ್ತಾಗಲಿಲ್ಲ. ಚಳಿಯೋ ಗಾಳಿಯೋ ಯಾವುದರ ಗೊಡವೆಯೂ ತಿಳಿಯಲಿಲ್ಲ. ಮೊದಲು ನನ್ನ ಹಸಿವೆ ತೀರಬೇಕು. ಹಸಿವೆ ತೀರಬೇಕಾದರೆ ಮನೆ ಮನೆ ಅಲೆಯಬೇಕು, ಬೇಡಬೇಕು. ಚಳಿ ಚಳಿ ಎಂದು ಕುಳಿತರೆ ಹೊಟ್ಟೆ ಹೇಗೆ ತುಂಬೀತು



ಸ್ವಾಮಿ ?" ಎಂದು ಯಾಚಕನು ಹೇಳಲು, "ಹೊಟ್ಟೆ ತುಂಬಿದ ಮೇಲೆ ಹಟ್ಟಿಗೆ ಹೋಗಿ ಹಾಲು ಹಿಂಡಿದೆಯಲ್ಲಾ ? ಅದು ಹೇಗೆ ?" ಎಂದು ಕೇಳಿದನು ಜೀತೇಂದ್ರ.

"ಅದರಲ್ಲಿ ಆಶ್ಚರ್ಯವೇನಿದೆ ಸ್ವಾಮಿ ? ಅಮ್ಮಾ ಅವರು ಇಲ್ಲೇ ಇರು ಅಂತ ಹೇಳಿ ನನಗೆ ಹೊಟ್ಟೆ ತುಂಬಾ ಊಟಹಾಕಿ ಹಸಿವೆ ತೀರಿಸಿದ್ದಾರೆ. ಆ ಅಮ್ಮ ಏನು ಹೇಳಿದರೂ ಮಾಡಬೇಕೆಂಬಷ್ಟು ಉತ್ಸಾಹ ಮನಸ್ಸಿಗೆ ಬಂತು. ಹಾಲು ಹಿಂಡುವಾಗ ಅದೇ ಒಂದು ತೃಪ್ತಿ. ಅಮ್ಮಾ ಅವರಿಗೆ ಸಂತೋಷವಾಗುವ ಹಾಗೆ ಮಾಡುತ್ತೇನೆ ಅಂತ. ಆಗ ಚಳಿಯ ಆಲೋಚನೆ ತೋರಲೇ ಇಲ್ಲ" ಎಂದನು ಆ ಯಾಚಕ.

ಆಗ ಜಿತೇಂದ್ರನಿಗೆ ಒಂದು ಮುಖ್ಯ ವಿಷಯ ಅರ್ಥವಾಯಿತು. ಯಾಚಕನಿಗೆ ಎಲ್ಲಕ್ಕೂ ಮೊದಲು ಹಸಿವೆಯನ್ನು ಅಡಗಿಸಿಕೊಳ್ಳಬೇಕಿತ್ತು. ಅದೊಂದೇ ಆಲೋಚನೆಯಲ್ಲಿ ಅವನಿಗೆ ಚಳಿಯ ಬಾಧೆ ತಿಳಿಯಲಿಲ್ಲ. ಹೊಟ್ಟೆ ತುಂಬಿದ ಮೇಲೆ ಕೃತಜ್ಞತಾ ಭಾವವು ಮೇಲೆದ್ದು ಚಳಿ ಗೊತ್ತಾಗಲಿಲ್ಲ. ಅವೆರಡೂ ತೀರಿದ ಮೇಲೆ ಚಳಿ ಬಾಧೆ ಗೊತ್ತಾಗಿ ಕಂಬಳಿ ಬೇಕೆನಿಸಿತು. ಮನಸ್ಸು ಶರೀರಕ್ಕಾಗುವ ಚಳಿಯ ಪೆಟ್ಟನ್ನು ತಿಳಿಯತೊಡಗಿತು. ಒಟ್ಟಿನಲ್ಲಿ ಅವನು ಉತ್ತಮ ಗುಣವುಳ್ಳವನಾದ್ದರಿಂದ ಊಟವಿಟ್ಟವರ ಮೇಲೆ ಕೃತಜ್ಞತೆ ತಾಳಿದ್ದಾನೆ.

ಇಷ್ಟು ತಿಳಿಯುವಾಗ ಜಿತೇಂದ್ರನಿಗೆ ಸಣ್ಣದೊಂದು ಸಂದೇಹ ಬಂತು. ಎಷ್ಟೇ ಕೃತಜ್ಞತೆ ಇದ್ದರೂ ಶರೀರಕ್ಕೆ ಉಷ್ಣವೋ ಚಳಿಯೋ ತಾಗಿದಾಗ ಅದನ್ನು ತಡೆದುಕೊಳ್ಳುವ ಶಕ್ತಿಗೆ ಒಂದು ಪರಿಮಿತಿಯುಂಟು. "ಅಲ್ಲಪ್ಪಾ, ರಕ್ತವನ್ನು ಗಡ್ಡೆ ಕಟ್ಟಿಸುವಂತಹ ಭಯಂಕರ ಚಳಿಯನ್ನು ನೀನು ಹೇಗೆ ತಡೆದುಕೊಂಡು ನಿಂತೆಯೋ ನನಗೆ ಆಶ್ಚರ್ಯವಾಗಿದೆ" ಎಂದನು ಜಿತೇಂದ್ರ.

ಅದಕ್ಕೆ ಯಾಚಕನು ಸಣ್ಣಗೆ ನಗುತ್ತ, "ಅದೇನಿದೆ ಸ್ವಾಮಿ, ಎಲ್ಲದಕ್ಕೂ ಸೌಕರ್ಯವುಳ್ಳವರ ಶರೀರ ಧರ್ಮವೇ ಬೇರೆ. ನನ್ನಂಥವನಿಗೆ ಈ ಚಳಿ ನೀವು ಅಂದುಕೊಳ್ಳುವ ಹಾಗೇನಿಲ್ಲ. ಅತೀ ಅಗತ್ಯಬಿದ್ದಾಗ ಎಂಥ ಚಳಿಯನ್ನೂ ತಡೆದುಕೊಳ್ಳಲು ಮನಸ್ಸಿಗೆ ಶಕ್ತಿ ಬರುತ್ತದೆ ಸ್ವಾಮಿ" ಎಂದನು ಯಾಚಕ.

ಜಿತೇಂದ್ರನ ಸಂದೇಹ ತೀರಿತು. ಅಂದಿನಿಂದ ಅವನೂ ಉಳಿದವರೂ ಚಳಿಗೆ ಹೆಚ್ಚು ಹೆದರುವುದನ್ನು ಬಿಟ್ಟರು. ಸೇವಕರೂ ಹಿಂಜರಿಯದೆ ಎಲ್ಲಾ ಕೆಲಸಗಳನ್ನೂ ಮಾಡತೊಡಗಿದರು. ಆ ಯಾಚಕನನ್ನು ಕೂಡಾ ಜಿತೇಂದ್ರನು ತನ್ನ ಸೇವಕರೊಂದಿಗೆ ಸೇರಿಸಿಕೊಂಡನು.



# ಹದ್ದುಗಳು

ಬೆಟ್ಟಗಳ ಮೇಲಿನಿಂದ ದುರ್ಬೀನಿನಲ್ಲಿ ನಾವು ಕೆಳಗಿನ ಕಣಿವೆಗಳಲ್ಲಿಯ ಮರಮಟ್ಟುಗಳನ್ನು ಸ್ಪಷ್ಟವಾಗಿ ನೋಡುವ ಹಾಗೆ ದುರ್ಬೀನು (ಬೈನಾಕ್ಯುಲರ್ಸ್) ಇಲ್ಲದೆಯೇ ಎಷ್ಟು ಎತ್ತರದಿಂದಾದರೂ ನೆಲದ ಮೇಲೆ ನೋಡಬಲ್ಲ ಶಕ್ತಿಯುಳ್ಳ ಪಕ್ಷಿಗಳು ಹದ್ದುಗಳು.

ಇವುಗಳ ಕಣ್ಣುಗಳು ಸಹಜವಾಗಿಯೇ ದುರ್ಬೀನಿನ ಹಾಗೆ ವರ್ತಿಸುತ್ತವೆ. ಮನುಷ್ಯರಿಗಾಗಲೀ, ಬೇರೆ ಯಾವ ಪಕ್ಷಿಗಾಗಲೀ ಇಂತಹ ಶಕ್ತಿ ಇಲ್ಲ.

ಹದ್ದುಗಳ ಕಣ್ಣಿನಲ್ಲಿ ಸಮೀಪದವುಗಳನ್ನು ನೋಡಲು ಒಂದು ಭಾಗವೂ, ದೂರದಲ್ಲಿರುವವುಗಳನ್ನು ನೋಡಲು ಇನ್ನೊಂದು ಕೇಂದ್ರೀಕೃತ ಭಾಗವೂ ಕೆಲಸ ಮಾಡುತ್ತವೆ. ಆಹಾರಗಳ ಅನ್ವೇಷಣೆಗೆ ಈ ಶಕ್ತಿ ಎಷ್ಟೋ ಉಪಯೋಗವಾಗುತ್ತದೆ.

ಡೇಗೆಗಳೆನ್ನಲ್ಪಡುವ ಮಾಂಸಾಹಾರಿಗಳಾದ ಹದ್ದುಗಳು ಆಕಾರದಲ್ಲಿ ಬಹಳ ದೊಡ್ಡವು. ಒಂದು ಮೀಟರಿನಷ್ಟು ಉದ್ದವಿರುತ್ತವೆ. ಬಲವಾದ ರೆಕ್ಕೆಗಳಿಂದ, ನಿರಾಯಾಸವಾಗಿ ಆಕಾಶದಲ್ಲಿ ಹಾರಿಹೋಗುತ್ತವೆ. ಇವುಗಳ ತಲೆ, ಕುತ್ತಿಗೆಗಳಲ್ಲಿ ಗರಿಗಳಿರುವುದಿಲ್ಲ. ಬಲವಾದ ಕಾಲುಗಳ ಕೊನೆಯಲ್ಲಿ ಮೂರು ಬೆರಳುಗಳು ಮುಂದಕ್ಕೂ, ಒಂದು ಬೆರಳು ಹಿಂದಕ್ಕೂ ಚಾಚಿಕೊಂಡಿರುತ್ತವೆ. ಮೂಗು ದೃಢವಾಗಿ ಮುಂದಕ್ಕೆ ಬಾಗಿ ದಟ್ಟವಾದ ಚರ್ಮವನ್ನು ಸುಲಭವಾಗಿ ಸೀಳುವಂತಿರುತ್ತವೆ.

ಹದ್ದುಗಳು ಮಾಂಸಾಹಾರಿಗಳೇ ಆದರೂ ಇವು ಪ್ರಾಣಿಗಳನ್ನು, ಪಕ್ಷಿಗಳನ್ನು ಕೊಂದು ತಿನ್ನುವುದಿಲ್ಲ. ಸತ್ತವುಗಳನ್ನು ಕಿತ್ತು ತಿನ್ನುತ್ತವೆ.

ಏಷ್ಯಾ, ಆಫ್ರಿಕಾ ಖಂಡಗಳಲ್ಲಿಯೂ, ಐರೋಪಾ ಖಂಡದ ಉಷ್ಣ ಪ್ರಾಂತಗಳಲ್ಲಿಯೂ ಯಾವುದಾದರೂ ಕಾಡುಪ್ರಾಣಿ ಸತ್ತು ಹೋಗಿದ್ದರೆ, ಅಲ್ಲಿ ಡೇಗೆಗಳು ಗುಂಪು ಗುಂಪಾಗಿ ಎರಗಿ ಆ ಪ್ರಾಣಿಯ ಎಲುಬುಗಳ ಮೇಲಿನ ಮಾಂಸವನ್ನೆಲ್ಲಾ ಆನಂದದಿಂದ ಕಿತ್ತು ತಿನ್ನುತ್ತವೆ. ಆಹಾರ ಲಭಿಸದಿದ್ದಾಗ ಉಪವಾಸವಿರಲಿಕ್ಕೂ ಅಭ್ಯಾಸವಿರುವ ಈ ಪಕ್ಷಿಗಳು, ತಿಂಡಿ ದೊರಕಿದಾಗ ಬೇಕಾದುದಕ್ಕಿಂತ ಹೆಚ್ಚಾಗಿಯೇ ತಿನ್ನುತ್ತವೆ. ಹದ್ದುಗಳು ಪ್ರಾಣಿ ಪ್ರೇತಗಳನ್ನು ಕಿತ್ತು ತಿನ್ನುವುದರಿಂದ ವಾತಾವರಣದ ಕಾಲುಷ್ಯಗಳು ಹೋಗಿಬಿಡುತ್ತವೆ.

ಹದ್ದುಗಳಲ್ಲಿ ಅನೇಕ ಬಗೆಗಳಿದ್ದರೂ ನಮ್ಮ ದೇಶದಲ್ಲಿ ಕಪ್ಪು ಹದ್ದುಗಳೇ ಹೆಚ್ಚಾಗಿ ಕಾಣುತ್ತವೆ.





## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



S. B. Prasad



Madhavi Sanara

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಅಕ್ಟೋಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅಣ್ಣನಿಗೆ ಪರೀಕ್ಷೆಯ ಚಿಂತೆ

ಎರಡನೇ ಫೋಟೋ : ತಮ್ಮನಿಗೆ ನಿಶ್ಚಿಂತೆ

ಕಳುಹಿಸಿದವರು : ಬಿ. ಪ್ರಕಾಶ್, ಕೆ. ಕೆ. ನಗರ, ಮದರಾಸು-೭೮

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ದಿ ಬೆಂಗಾಲ್ ಗೆಜೆಟ್ (೧೭೮೦) ೨. ಆಕ್ರಾನ್ ೩. ಆಡಮ್ಸ್ ಶಿಖರ ೪. ಕುಶೀ ನಗರ ೫. ಪತಂಜಲಿ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor : NAGI REDDI.